# ಆರೋಗ್ಯ ಪಾಲನೆ

# ಮೂಢ ಆಚಾರಗಳು



ಡಾ.ಸ.ಜ.ನಾಗಲೋಟಿಮಠ

ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು

# ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು

ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ ಆವರಣ
ಬೆಂಗಳೂರು-560 012

ವಿಜ್ಞಾನ ಪ್ರಚಾರಕ್ಕೆಂದೇ ಸ್ಥಾಪಿತವಾದ ರಾಜ್ಯಮಟ್ಟದ ಸ್ವಾಯತ್ತ ಸಂಸ್ಥೆ

## ಧ್ಯೇಯೋದ್ದೇಶಗಳು

ರಾಜ್ಯದ ಜನತೆಯಲ್ಲಿ ವಿಜ್ಞಾನವನ್ನು ಪ್ರಚಾರ ಮಾಡುವುದು, ವೈಜ್ಞಾನಿಕ ಮನೋಧರ್ಮವನ್ನು ಬೆಳೆಸುವುದು.

ವಿಚಾರಗೋಷ್ಠಿ, ಉಪನ್ಯಾಸ, ತರಬೇತಿ ಶಿಬಿರ, ಸಾರ್ವಜನಿಕ ಚರ್ಚೆ, ಶೈಕ್ಷಣಿಕ ಪ್ರವಾಸ, ವಸ್ತು ಪ್ರದರ್ಶನ ಮುಂತಾದವುಗಳನ್ನು ಏರ್ಪಡಿಸುವುದು. ಕನ್ನಡದಲ್ಲಿ ವಿಜ್ಞಾನದ ಪುಸ್ತಕಗಳನ್ನೂ, ನಿಯತಕಾಲಿಕೆಗಳನ್ನೂ ಪ್ರಕಟಿಸುವುದು.

ವಿಜ್ಞಾನಕ್ಕೆ ಸಂಬಂಧಿಸಿದ ಸಂಘ – ಸಂಸ್ಥೆಗಳನ್ನು ಗುರುತಿಸಿ ಅವುಗಳಿಗೆ ಅವಶ್ಯಕವಾದ ಪ್ರೋತ್ಸಾಹ ಮತ್ತು ನೆರವು ನೀಡುವುದು

ವಿಜ್ಞಾನವನ್ನು ಜನಪ್ರಿಯಗೊಳಿಸಲು ಆಸಕ್ತಿ ಇರುವವರನ್ನೆಲ್ಲ ಸಂಘಟಿಸುವುದು.

**ಸದಸ್ಯತ್ವ ಶುಲ್ಕ :**

| | |
|---|---|
| ಸಾಮಾನ್ಯ ಸದಸ್ಯರು | : ವರ್ಷಕ್ಕೆ ರೂ. 50-00 |
| ಅಜೀವ ಸದಸ್ಯತ್ವ | : ರೂ. 500-00 |
| ದಾನಿಗಳು | : ರೂ. 1,000-00 |
| ದಾನಿ ಸಂಘ ಸಂಸ್ಥೆಗಳು | : ರೂ. 2,000-00 |

ಬೆಲೆ : 6-00

AROGYA PALANE MATTU MOODA ACHARAGALU
a populur account on Suprestitions in Health Practice written by Dr. S J. Nagaloti Math and published by Karnataka Rajya Vijnana Parishat, Indian Institute of Science Campus, Bangalore-560 012. Price : Rs. 6-00

ಪ್ರಥಮ ಮುದ್ರಣ : 1990
ದ್ವಿತೀಯ ಮುದ್ರಣ : 1991
ತೃತೀಯ ಮುದ್ರಣ : 1993

ಲೇಖಕರು : ಡಾ|| ಸ. ಜ. ನಾಗಲೋಟಿ ಮಠ








ಬೆಲೆ : ರೂ. 6-00

ಪ್ರಕಾಶನ :
ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು
ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಸೈನ್ಸ್ ಆವರಣ
ಬೆಂಗಳೂರು - 560 012

ಮುದ್ರಣ :
ಚಿತ್ರಾ ಪ್ರಿಂಟರ್ಸ್
ಮಲ್ಲೇಶ್ವರಂ, ಬೆಂಗಳೂರು – 560 003
ದೂರವಾಣಿ : 36 43 67

# ಅರಿಕೆ

ನಮ್ಮ ರಾಜ್ಯದ ಜನರಲ್ಲಿ ವಿಜ್ಞಾನವನ್ನು ಪ್ರಚಾರಮಾಡಿ ವೈಜ್ಞಾನಿಕ ಮನೋಭಾವದ ಬೆಳವಣಿಗೆಗೆ ಉತ್ತೇಜನ ನೀಡುವುದು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಮುಖ್ಯ ಧ್ಯೇಯ. ರಾಜ್ಯದ ವಿವಿಧ ಸ್ಥಳಗಳಲ್ಲಿ ಸ್ವಯಂಪ್ರೇರಣೆಯಿಂದ ರೂಪುಗೊಂಡಿರುವ ನಾನ್ನೂರಕ್ಕೂ ಹೆಚ್ಚಿನ ಸಂಖ್ಯೆಯ ಪರಿಷತ್ ಘಟಕಗಳು ಸ್ಥಳೀಯವಾಗಿ ಈ ಕೆಲಸದಲ್ಲಿ ನಿರತವಾಗಿವೆ. ಉಪನ್ಯಾಸಗಳು, ವಿಚಾರ ಸಂಕಿರಣಗಳು, ವೈಜ್ಞಾನಿಕ ಪ್ರದರ್ಶನಗಳು ಮುಂತಾದುವನ್ನು ಏರ್ಪಡಿಸುವ ಮೂಲಕವೂ ದಿನನಿತ್ಯದ ಸಮಸ್ಯೆಗಳಿಗೆ ವೈಜ್ಞಾನಿಕ ಪರಿಹಾರಗಳನ್ನು ಕಂಡುಕೊಳ್ಳುವಲ್ಲಿ ಜನತೆಗೆ ನೆರವು ನೀಡುವ ಮೂಲಕವೂ ಪರಿಷತ್ತಿನ ಧ್ಯೇಯವನ್ನು ಸಫಲಗೊಳಿಸುವ ಪ್ರಯತ್ನ ನಡೆದಿದೆ. ಪರಿಷತ್ತು ಪ್ರಕಟಿಸಿರುವ ನಿಯತಕಾಲಿಕಗಳೂ, ಕಿರುಹೊತ್ತಿಗೆಗಳೂ, ವೈಜ್ಞಾನಿಕ ಚಲನ ಚಿತ್ರಗಳೂ, ಅಲ್ಲಲ್ಲಿ ಸ್ಥಾಪಿಸಲಾಗಿರುವ ವಿಜ್ಞಾನ ಕೇಂದ್ರಗಳೂ ಆಗಾಗ ನಡೆಸುವ ಕನ್ನಡ ವಿಜ್ಞಾನ ಲೇಖಕರ ಹಾಗೂ ವೈಜ್ಞಾನಿಕ ಕಾರ್ಯಕರ್ತರ ಕಾರ್ಯ ಶಿಬಿರಗಳೂ ಆ ಪ್ರಯತ್ನಗಳಿಗೆ ಬೆಂಬಲ ನೀಡುತ್ತಲಿವೆ. ನಾವು ಹದಿನಾಲ್ಕು ವರ್ಷದಿಂದ ಪ್ರಕಟಿಸುತ್ತಿರುವ ಬಾಲವಿಜ್ಞಾನ ಮಾಸಪತ್ರಿಕೆ ಈ ದಿಶೆಯಲ್ಲಿ ಸಾಕಷ್ಟು ಯಶಸ್ಸುಗಳಿಸಿ ಜನಪ್ರಿಯವಾಗಿದೆ. ಹಲವು ವರ್ಷಗಳಿಂದ ಪ್ರಕಟಿಸಲಾಗುತ್ತಿರುವ "ವಿಜ್ಞಾನ ದೀಪ" ಎಂಬ ಗೋಡೆ ಪತ್ರಿಕೆಗೆ ಶಾಲೆಗಳಿಂದ ಸಾಕಷ್ಟು ಉತ್ತೇಜನ ದೊರಕಿದೆ. ನಮ್ಮ ಕಾರ್ಯಾಚರಣೆಯನ್ನು ಗಮನಿಸಿ ಭಾರತ ಸರ್ಕಾರ ಅತ್ಯುತ್ತಮ ವಿಜ್ಞಾನ ಪ್ರಚಾರಕ್ಕೆಂದು ಮೀಸಲಾಗಿಟ್ಟಿರುವ ತನ್ನ ಪ್ರಪ್ರಥಮ ಬಹುಮಾನವನ್ನು 1988ರಲ್ಲಿ ಕರಾವಿಪಕ್ಕೆ ನೀಡಿರುವುದು ಸಂತಸದವಿಷಯ.

ವಿಜ್ಞಾನ ವಿಷಯಗಳನ್ನು ಕುರಿತು ಅಗ್ಗವಾದ ಕಿರುಹೊತ್ತಗೆಗಳನ್ನು ಪ್ರಕಟಿಸುವ ಕಾರ್ಯವನ್ನು ಪರಿಷತ್ತು ಪ್ರಾರಂಭಿಸಿ ಕೇವಲ ಹನ್ನೆರಡು ವರ್ಷಗಳಾದವು. ಪ್ರಕಟಣೆಗಳ ಸಂಖ್ಯೆ ಈಗಾಗಲೇ ಅರವತ್ತನ್ನು ದಾಟಿದೆ. ಹಲವಾರು ಶೀರ್ಷಿಕೆಗಳು ಮೂರು ನಾಲ್ಕು ಬಾರಿ ಮರುಮುದ್ರಣವನ್ನು ಕಂಡು ಹತ್ತಾರು

ಸಾವಿರ ಸಂಖ್ಯೆಯಲ್ಲಿ ವಿತರಣಗೊಂಡಿವೆ. ಕನ್ನಡ ಪುಸ್ತಕಗಳ ಪ್ರಕಟಣೆಯ ಇತಿಹಾಸದಲ್ಲಿ ಈ ದಾಖಲೆಯನ್ನು ಸ್ಥಾಪಿಸಲು ಸಾಧ್ಯವಾಗಿರುವುದಕ್ಕೆ ಕಾರಣ, ನಮ್ಮ ಜನರ ಅತ್ಯಂತ ಜರೂರು ಅಗತ್ಯವೊಂದನ್ನು ಗುರುತಿಸಿ ಆ ಅಗತ್ಯವನ್ನು ಪೂರೈಸುವ ಯತ್ನವನ್ನು ಪರಿಷತ್ತು ಕೈಗೊಂಡಿರುವುದು.

ವೈಜ್ಞಾನಿಕ ಶಿಕ್ಷಣಕ್ಕೆ ನೆರವು ನೀಡುವ ಮಾದರಿಗಳನ್ನೂ, ಕಿಟ್‌ಗಳನ್ನೂ ಪೋಸ್ಟರ್‌ಗಳನ್ನೂ ಬೆಳಗಾವಿ ವಿಜ್ಞಾನ ಕೇಂದ್ರ ತಯಾರು ಮಾಡುತ್ತಿದೆ. ಈ ಕೇಂದ್ರದಲ್ಲಿ ಪರಿಸರ ಸಂರಕ್ಷಣೆಯ ಬಗ್ಗೆ ಶಿಕ್ಷಣವನ್ನು ನೀಡಲಾಗುತ್ತಿದೆ.

ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಹಲವು ಗ್ರಾಮಾಂತರ ಘಟಕಗಳು ಆರೋಗ್ಯಪಾಲನೆ ಹಾಗೂ ತಿಳುವಳಿಕೆಗಳ ಬಗ್ಗೆ ಕಾರ್ಯಕ್ರಮಗಳನ್ನು ನಡೆಸುತ್ತಿದ್ದಾರೆ. ಆರೋಗ್ಯ ಪಾಲನೆ ವಿಚಾರಗಳು ಗ್ರಾಮಾಂತರ ಪ್ರದೇಶಗಳಲ್ಲಿ ಜನಪ್ರಿಯವಾಗುತ್ತದೆ ಎಂಬುದರಲ್ಲಿ ಸಂದೇಹವಿಲ್ಲ. ಈ ಕಿರು ಹೊತ್ತಗೆಯಲ್ಲಿ ಲೇಖಕರು ಗ್ರಾಮಾಂತರ ಪ್ರದೇಶಗಳಲ್ಲಿ ಜನಸಾಮಾನ್ಯರು ಆಚರಿಸುವ ಕೆಲ ಮೂಢ ಆಚಾರಗಳ ಬಗ್ಗೆ ವಿವರಣೆಗಳನ್ನು ನೀಡಿದ್ದಾರೆ. ಆರೋಗ್ಯ ಪ್ರಚಾರಕಾರ್ಯಕ್ಕೆ ಈ ಕಿರು ಹೊತ್ತಗೆ ಉತ್ತಮ ಸಾಧನವಾಗಬಲ್ಲದು ಎಂಬ ವಿಶ್ವಾಸವಿದೆ.

ಆರೋಗ್ಯ ಪಾಲನೆ–ಮೂಢ ಆಚಾರಗಳು ಎಂಬ ಕಿರು ಹೊತ್ತಗೆಯನ್ನು ರಚಿಸಿ ಕೊಟ್ಟ ಡಾ. ಸ. ಜ. ನಾಗಲೋಟಿಮಠ, ಎಂ. ಡಿ. ಡಿ. ಸಿ. ಪಿ. ಪ್ರಿನ್ಸಿಪಾಲ್, ಬಿ. ಎಲ್. ಡಿ. ಇ. ಎ.ರವರ ಮೆಡಿಕಲ್ ಕಾಲೇಜು, ಬಿಜಾಪುರ. ಅವರಿಗೂ ಮತ್ತು ತ್ವರಿತವಾಗಿ ಮುದ್ರಿಸಿದ ಚಿತ್ರಾ ಪ್ರಿಂಟರ್ಸ್ ಮಾಲೀಕರಾದ ಶ್ರೀ ಎನ್. ಎ. ಚಿದಂಬರ ಹಾಗೂ ಸಿಬ್ಬಂದಿ ವರ್ಗಕ್ಕೂ ಪರಿಷತ್ತು ತನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಬೆಂಗಳೂರು
ಮಾರ್ಚ್ 1993

ಎಂ. ಎ. ಸೇತುರಾವ್
ಅಧ್ಯಕ್ಷರು, ಕರಾವಿಪ

# ಲೇಖಕನ ಮಾತು

ಮಾನವನಿಗೆ ತನ್ನ ಆರೋಗ್ಯದ ಮಹತ್ವ ಆದಿಕಾಲದಿಂದಲೂ ಗೊತ್ತು ಎಂಬುವುದಕ್ಕೆ ಅನೇಕ ಉದಾಹರಣೆಗಳನ್ನು ಕೊಡಬಹುದು. ತನ್ನ ಆರೋಗ್ಯ ರಕ್ಷಣೆಗಾಗಿ ಅವನು ಹಲವಾರು ಪ್ರಯತ್ನಗಳನ್ನು ಮಾಡಿರುವನು, ಈ ಪ್ರಯತ್ನಗಳು ಆಯಾ ಕಾಲದ ಅವನ ವೈಜ್ಞಾನಿಕ ತಿಳುವಳಿಕೆಯ ಮೇಲೆ ಅವಲಂಬಿಸಿರುತ್ತವೆ.

ಪ್ರಪ್ರಥಮವಾಗಿ ಆಚರಣೆಯಲ್ಲಿ ಬಂದಾಗ ಅವನ್ನು ಅಂದಿನ ವಿಜ್ಞಾನವು ಉತ್ತಮ ಸೂಚನೆಗಳೆಂದೇ ಅಂಗಿಕರಿಸಿರಬೇಕು. ಅಂದಿನ ಜ್ಞಾನವಂತರು, ವಿಜ್ಞಾನಿಗಳು ಈ ತಿಳುವಳಿಕೆಯನ್ನು, ಆಚರಣೆಯಲ್ಲಿ ತರಲು ಜನರನ್ನು ಪ್ರೋತ್ಸಾಹಿಸಿರಲೂ ಸಾಕು.

ಆದ್ದರಿಂದ ಈ ನಡವಳಿಕೆಗಳು, ನಂಬಿಕೆಗಳು, ತಲತಲಾಂತರದಿಂದ ಜನರಲ್ಲಿ ಬಂದಿವೆ. ಬರಬರುತ್ತಾ ವಿಜ್ಞಾನವೂ ಮುಂದುವರೆದಂತೆ ಜನತೆಯ ತಿಳಿವಳಿಕೆ ಹೆಚ್ಚಿದಂತೆ ಈ ನಂಬಿಕೆಗಳು ಅವೈಜ್ಞಾನಿಕವೆಂದೂ ಅಜ್ಞಾನದ ವಿಷಯಗಳೆಂದೂ ಪರಿಗಣಿಸಲ್ಪಡಹತ್ತಿದವು. ಇಂತಹ ನಂಬಿಕೆಗಳನ್ನೇ ನಾವು ಮೂಢನಂಬಿಕೆಗಳೆಂದೂ, ಆಚಾರಗಳೆಂದೂ ಕರೆಯುತ್ತಿರುವೆವು. ಕಾರಣ ಇಂದು ನಾವು ಮೂಢ ಆಚಾರಗಳೆಂದು ಕರೆಯುತ್ತಿರುವ ಸಂಗತಿಗಳು ಒಂದು ಕಾಲದಲ್ಲಿ ವಿಶಿಷ್ಟ ಹಾಗೂ ವಿಶೇಷ ಜ್ಞಾನದ ಕುರುಹುಗಳಾಗಿರಲು ಸಾಕು.

ನಮ್ಮ ಸಮಾಜದಲ್ಲಿ ಹಲವಾರು ಮೂಢ ಆಚಾರಗಳು ಇಂದಿಗೂ ಪ್ರಚಲಿತವಾಗಿವೆ. ವಿಜ್ಞಾನವನ್ನು ಸರಿಯಾಗಿ ತಿಳಿದವರಿಗೆ ಇವು ಮೂಢ ಆಚಾರಗಳು. ಅದರ ಜ್ಞಾನವನ್ನು ಸರಿಯಾಗಿ ತಿಳಿದುಕೊಳ್ಳದವರಿಗೆ ಅವು ಸರಿಯಾದ ಆಚಾರಗಳೇ! ಒಂದುವೇಳೆ ನಾವೇನಾದರೂ ಇಂತಹ ಜನರಿಗೆ ನೀವು ಮೂಢನಂಬಿಕೆಗಳಲ್ಲಿ ನಂಬಿಕೆ ಇಟ್ಟದ್ದೀರಿ ಎಂದೇನಾದರೂ ಹೇಳಿದರೆ ಮರಳಿ

ಅವರು ನಮ್ಮನ್ನೆ ಮೂಢರೆಂದು ಹಳಿಯಲು ಸಾಧ್ಯವಿದೆ. ಕಾರಣ ಯಾವುದೇ ಒಂದು ಆಚಾರವನ್ನು ನಂಬಿಕೆಯನ್ನು ಮೂಢತನ ಎಂದು ಹಳಿಯು ವದಕ್ಕಿಂತ ಮೊದಲು ಅದರ ಜ್ಞಾನ ನಮಗೆ ಸಂಪೂರ್ಣವಾಗಬೇಕು. ಇದೇ ಒಂದು ಉದ್ದೇಶದಿಂದ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನವರು ಒಂದು ಪುಸ್ತಕವನ್ನು ಪ್ರಕಟಿಸಲು ನಿರ್ಣಯಿಸಿದರು. ಅದನ್ನು ಬರಿಯುವ ಸುಯೋಗ ನನಗೆ ದೊರಕಿದೆ. ಸಾಧ್ಯವಾದಷ್ಟು ವಿಷಯ ಸ್ವಾರಸ್ಯಕರವಾಗಿರಲೆಂದು ಹಾಗೂ ಯಾರ ಮನಸ್ಸಿಗೂ ನೋವಾಗದಿರಲೆಂದು ಪ್ರಯತ್ನ ಮಾಡಿರುವೆನು.

ಇಂತಹ ಒಂದು ಸುಯೋಗವನ್ನು ನನಗೆ ಒದಗಿಸಿದ್ದಕ್ಕಾಗಿ ಕ.ರಾ.ವಿ.ಪ.ದ. ಅಧಿಕಾರಿಗಳಿಗೂ ಹಾಗೂ ಸದಸ್ಯರಿಗೂ ನನ್ನ ಅನಂತ ಕೃತಜ್ಞತೆಗಳು. ಈ ಪುಸ್ತಕವನ್ನು ಬರೆಯುವಲ್ಲಿ ನನ್ನೊಡನೆ ಸಹಕರಿಸಿದ ನನ್ನ ಸಹೋದ್ಯೋಗಿಗಳಿಗೆ, ಮಿತ್ರರಿಗೆ, ಹಾಗೂ ಲಿಪಿಕಾರನಾಗಿ ಕಾರ್ಯ ನಿರ್ವಹಿಸಿದ ಮಹಾಂತೇಶ ಬಿ. ಇಲಕಲ್ಲೆ ಇವರೆಲ್ಲರಿಗೂ ನನ್ನ ಅನೇಕ ವಂದನೆಗಳು.

ಡಾ|| ಎಸ್. ಜೆ. ನಾಗಲೋಟಿಮಠ
ಎಂ.ಡಿ.ಡಿ.ಸಿ.ಪಿ.
ಪ್ರಿನ್ಸಿಪಾಲ್,
ಬಿ. ಎಲ್. ಡಿ. ಇ. ಎ. ರವರ
ಮೆಡಿಕಲ್ ಕಾಲೇಜು, ಬಿಜಾಪುರ.

# ಪೀಠಿಕೆ

ಮೂಢ ಆಚಾರಗಳೆಂದರೆ ಅವೈಜ್ಞಾನಿಕ ಆಚಾರಗಳೆಂದು ಮಾತ್ರ ಅರ್ಥ. ಇಂಥ ಆಚಾರಗಳು ಸಮಾಜದಲ್ಲಿ ಅಸಂಖ್ಯ. ಪ್ರತಿಯೊಂದು ರಂಗ ದಲ್ಲಿಯೂ ಇಂಥ ಆಚಾರಗಳು ಸಾಕಷ್ಟಿವೆ. ಅವೆಲ್ಲವುಗಳ ಬಗ್ಗೆ ಇಲ್ಲಿ ವಿವರ ಗಳನ್ನು ಕೊಡಲಿಕ್ಕಾಗದು. ಈಗ ನಾನು ಕೈಕೊಂಡ ಕಾರ್ಯವೆಂದರೆ ಅಂಥ ಅಸಂಖ್ಯೆ ಆಚಾರಗಳಲ್ಲಿ ಕೇವಲ ಆರೋಗ್ಯ ಪಾಲನೆಗೆ ಸಂಬಂಧಿಸಿದವುಗಳನ್ನು ಮಾತ್ರ ವಿಶ್ಲೇಷಿಸಲು ಒಂದು ಪ್ರಯತ್ನ.

ಮೂಢ ಆಚಾರಗಳನ್ನು ಕೆಲವು ಆಧಾರಗಳ ಮೇಲೆ ಗುಂಪೀಕರಿಸಬಹುದು- ಒಂದೊಂದು ಗುಂಪಿನಲ್ಲಿ ಇಂಥ ನಂಬಿಕೆಗಳು ಒಂದೆರಡರಿಂದ ಹತ್ತಾರು ಇರ ಬಹುದು. ಇನ್ನು ಪ್ರತಿಯೊಂದು ದೇಶದ ಅಥವಾ ರಾಜ್ಯದ ಭಾಗದಲ್ಲಿಯೂ ಒಂದೊಂದು ತರಹದ ಆಚಾರಗಳು ಕಂಡುಬರುತ್ತವೆ. ಅಂದರೆ ಉತ್ತರ ಕರ್ನಾಟಕದಲ್ಲಿ ಕಂಡುಬರುವ ಮೂಢ ಆಚಾರಗಳು ಮೈಸೂರಿನ ಕಡೆಯವರಿಗೆ ಗೊತ್ತಿರಲಿಕ್ಕಿಲ್ಲ. ಮೈಸೂರಿನ ಕಡೆಯವರಿಗಿರುವ ಮೂಢ ಆಚಾರಗಳು ಉತ್ತರ ಕರ್ನಾಟಕದವರಿಗೆ ಗೊತ್ತಿರಲಿಕ್ಕಿಲ್ಲ. ಅದೇ ರೀತಿ ಕಾಶ್ಮೀರದಲ್ಲಿ ಇರುವ ಮೂಢ ಅಚಾರಗಳು ಯಾವುದೆಂಬುದು ನಮ್ಮ ರಾಜ್ಯದವರಿಗೆ ಗೊತ್ತಿರಲಿಕ್ಕಿಲ್ಲ. ಹೀಗೆ ಮೂಢ ಆಚಾರಗಳು ರಾಜ್ಯದಿಂದ ರಾಜ್ಯಕ್ಕೆ ಜನಾಂಗದಿಂದ ಜನಾಂಗಕ್ಕೆ ಬೇರೆ ಬೇರೆಯಾಗಿರುತ್ತವೆ. ಮೂಢ ಆಚಾರಗಳನ್ನು ಕೆಳಗಿನ ಗುಂಪುಗಳಲ್ಲಿ ವರ್ಗೀಕರಿಸಬಹುದು.

1) ಮುಟ್ಟು ಹಾಗೂ ಅದಕ್ಕೆ ಸಂಬಂಧಿಸಿದ ಆಚಾರಗಳು.
2) ಗರ್ಭ ಹಾಗೂ ಅದಕ್ಕೆ ಸಂಬಂಧಿಸಿದವು
3) ಹೊಟ್ಟೆನೋವಿಗೆ ಸಂಬಂಧಿಸಿದವು
4) ಕಾಮಾಲೆಗೆ ಸಂಬಂಧಿಸಿದವು
5) ಹಾಲು ಹಾಗೂ ನೀರಿನ ಬಳಕೆಗೆ ಸಂಬಂಧಿಸಿದವು 6) ಇತರೆ

ಇವುಗಳನ್ನು ಒಂದೊಂದಾಗಿ ವಿಶ್ಲೇಷಿಸುವುದು ಸೂಕ್ತ. ಮೊದಲು ಅವುಗಳ ಹೆಸರು, ನಂತರ ಅವುಗಳ ಬಗ್ಗೆ ಇರುವ ನಂಬಿಕೆಗಳನ್ನು ವಿವರಿಸಿ ವೈಜ್ಞಾನಿಕ ವಿವರಗಳನ್ನು ಕೊಟ್ಟು ಅವು ಯಾವ ರೀತಿಯಿಂದ ವ್ಯಕ್ತಿಯ ಆರೋಗ್ಯಕ್ಕೆ ಹಾನಿಯುಂಟುಮಾಡಬಹುದು ಎಂಬುದನ್ನು ತಿಳಿಸಲು ಪ್ರಯತ್ನಿಸಲಾಗಿದೆ.

# ಮುಟ್ಟಿಗೆ ಸಂಬಂಧಿಸಿದ ಆಚಾರಗಳು

**ನಂಬಿಕೆ**

ಹರೆಯದ ಸ್ತ್ರೀಯು ಮುಟ್ಟಾಗುವುದು ಕೆಡುಕೆಂದು ಮೊದಲಿನವರು ನಂಬಿದ್ದರು. ಪ್ರತಿ ತಿಂಗಳು ಸ್ತ್ರೀಯು ಮುಟ್ಟಾದಾಗ ಅವಳ ಗರ್ಭಾಶಯದಿಂದ ಸ್ರವಿಸುವ ರಕ್ತವು ಮೈಲಿಗೆ, ಹೊಲಸು, ಮುಟ್ಟಬಾರದ ಪದಾರ್ಥ, ಎಂದೇ ಬಗೆಯಲಾಗುತ್ತಿತ್ತು. ಕಾರಣವೇ ಸ್ತ್ರೀಯು ಮುಟ್ಟಾದ ದಿನಗಳಲ್ಲಿ ಆಕೆಯನ್ನು ಯಾರೂ ಮುಟ್ಟಬಾರದು ಎಂದು ನಿಯಮ ಹಾಕಿದ್ದರು. ಅವಳ ಮೈಮೇಲೆ ಹೋಗುವ ರಕ್ತವನ್ನು "ಹೊಲೆ" ಎಂದು ಕರೆಯುತ್ತಿದ್ದರು.

ಇಲ್ಲಿ "ಹೊಲೆ" ಎಂಬುದಕ್ಕೆ ಹೊಲಸು ಎಂಬ ಅರ್ಥ. ಯಾವ ಕಾರಣದಿಂದಲೋ ಏನೋ ಈ ತಿಳಿವಳಿಕೆ ಹಾಗೂ ನಂಬಿಕೆ ಕೇವಲ ಉಚ್ಚವರ್ಣದವರಲ್ಲಿ ಮಾತ್ರ ಬೆಳೆದು ಬಂದಿದೆ. ಹಾಗೂ ನೆಲೆಯೂರಿ ನಿಂತಿದೆ. ಆ ವರ್ಗದಲ್ಲಿಯೇ ಇದು ಇಂದಿಗೂ ಬಹಳ ಪ್ರಮಾಣದಲ್ಲಿ ಸ್ಥಿರವಾಗಿ ನಿಂತಿದೆ. ಭಾರತದಲ್ಲಿ ಮಾತ್ರ ಈ ನಂಬಿಕೆಯು ಇದೆ ಎಂದೇನೂ ಅಲ್ಲ. ಕೆಲವು ಇಸ್ಲಾಂ ದೇಶಗಳಲ್ಲಿಯೂ ಈ ತಿಳಿವಳಿಕೆ ಇದ್ದದ್ದು ತಿಳಿದುಬರುತ್ತದೆ.

**ಆಚರಣೆ**

ಸ್ತ್ರೀಯು ಮುಟ್ಟಾದಾಗ ನಡೆದುಕೊಳ್ಳುವ ರೀತಿ ರಿವಾಜುಗಳನ್ನು ನೋಡಿದರೆ ಆಶ್ಚರ್ಯವೆನಿಸಬಹುದು. ಮುಟ್ಟು ಕಂಡ ತಕ್ಷಣ ಸ್ತ್ರೀಯು ಒಮ್ಮಿಂದೊಮ್ಮೆಲೆ ಅಪವಿತ್ರಳೆಂದು ತಿಳಿಯಲಾಗುತ್ತಿದೆ. ಆಕೆ ನೇರವಾಗಿ ಮನೆಬಿಟ್ಟು ಹೊರಗೆ ಹೋಗಬೇಕು. ಹರಕು ಚಿಂದಿ. ಹಳೆಯ ಬಟ್ಟೆಗಳನ್ನೇ ತೊಡಬೇಕು. ದಿನಾಲೂ ಮಲಗುವ ಮಂಚ, ಗಾದಿ, ರಗ್ಗುಗಳನ್ನು ಬಿಟ್ಟು ಬೇರೆ ಚಾಪೆಯ ಮೇಲೆ ಮಲಗಬೇಕು. ಹೊದ್ದುಕೊಳ್ಳಲು ಒಂದು ಹಳೆಯ ಬಟ್ಟೆಯನ್ನು ಇಟ್ಟುಕೊಳ್ಳಬೇಕು. ಆಕೆ ತಿನ್ನುಣ್ಣುವುದು ಸಹ ಹೊಲೆಯೆಂದೆ ಭಾವಿಸಲಾಗುತ್ತಿದೆ. ಆಕೆಗೆ ಬೇರೆ ತಾಟು, ತಂಬಿಗೆ ಕೊಡುತ್ತಾರೆ. ಆಕೆಗೆ ಕುಡಿಯುವ ನೀರನ್ನು ಸಹ ದೂರದಿಂದಲೇ ತಣಿಸುತ್ತಾರೆ. ತನ್ನ ತಟ್ಟೆ

ತಂಬಿಗೆಗಳನ್ನು ಸ್ತ್ರೀಯು ತನ್ನೊಡನೆಯೇ ಇಟ್ಟುಕೊಳ್ಳಬೇಕು. ದೇವರ ಮನೆಯಲ್ಲಿ ಕಾಲಿಡಕೂಡದು. ಮಡಿಹೆಂಗಸನ್ನು ನೋಡಕೂಡದು. ತನ್ನ ಮಕ್ಕಳನ್ನೇ ಮುಟ್ಟಕೂಡದು. ಮುಟ್ಟಿದರೆ ಮಕ್ಕಳು ಅರಿವೆಗಳನ್ನು, ಕಳಚಿ ಆಕೆಯ ಹತ್ತಿರ ಬರಬೇಕು. ಅದರಲ್ಲಿಯೂ ಹೊಸ ಅರಿವೆಗಳಿದ್ದರೆ ಮೈಲಿಗೆ ಆಗುವುದಿಲ್ಲ.

ಆಕೆ ಅಡಿಗೆಯನ್ನು ಮಾಡಬಾರದು. ಮೇಲಿನ ಮಾತಿಗೆ ಸಂಪೂರ್ಣ ವಿಶ್ರಾಂತಿ ಎಂದು ಹೇಳಲಾಗುತ್ತಿದ್ದರೂ ಆಕೆಯಿಂದ ಹೊರಗಿನ ಎಲ್ಲಾ ಕೆಲಸಗಳನ್ನು ಅನೇಕರು ಮಾಡಿಸುತ್ತಾರೆ. ಇವೆಲ್ಲ ಸಂಗತಿಗಳಲ್ಲದೆ ಇನ್ನೂ ಹಲವಾರು ವಿಚಿತ್ರ ನಡವಳಿಕೆಗಳನ್ನು ಹೇಳಬಹುದು. ಇಂತಹ ಆಚರಣೆ ಕೆಲವು ಬ್ರಾಹ್ಮಣ ಕುಟುಂಬಗಳಲ್ಲಿ ಕಟ್ಟುನಿಟ್ಟಾಗಿ ಇಲ್ಲಿ ಇಂದಿಗೂ ನಡೆಯು ತ್ತದೆ. ಆ ಸ್ತ್ರೀಯ ಗಂಡನು ಮೆಡಿಕಲ್ ಕಾಲೇಜಿನಲ್ಲಿ ಪ್ರೊಫೆಸರ್ ಇದ್ದರೂ ಅವನಿಗೆ ಮುಟ್ಟಿನ ಮಾಹಿತಿ ಎಲ್ಲವೂ ತಿಳಿದಿದ್ದರೂ, ಆ ಮೂರು ದಿನಗಳವರೆಗೆ ತಾನೇ ಅಡಿಗೆ ಮಾಡಿ ಹೆಂಡತಿಗೆ ಬಡಿಸಬೇಕು. ಮಕ್ಕಳನ್ನು ತಾನೇ ನೋಡಿ ಕೊಳ್ಳಬೇಕು. ಮನೆಯ ಉಳಿದ ಕೆಲಸಗಳನ್ನು ನಿರ್ವಹಿಸಬೇಕು.

ಮೂರು ದಿನವಾದ ಮೇಲೆ ಯಥಾ ಪ್ರಕಾರ ಆ ಕೆಲಸಗಳನ್ನೆಲ್ಲ ಹೆಂಡತಿಗೆ ಬಿಟ್ಟು ತನ್ನ ಕೆಲಸಕ್ಕೆ ಅಣಿಯಾಗುತ್ತಾನೆ. ಕೆಲವು ಕುಟುಂಬಗಳಲ್ಲಿ ಇತ್ತೀಚೆಗೆ ಇದನ್ನು ಅಷ್ಟಾಗಿ ಆಚರಿಸುತ್ತಿರುವದಿಲ್ಲ. ವಿಚಿತ್ರವೆಂದರೆ ಈ ಆಚರಣೆ ಬೇರೆ ಹಿಂದುಳಿದ, ಮೂಢರೆನಿಸಿಕೊಳ್ಳುವ ಜನಾಂಗದಲ್ಲಿಯೇ ಇಲ್ಲ.

## ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ

ಹರೆಯದ ಸ್ತ್ರೀಯು ಮುಟ್ಟಾಗುವದು ಒಂದು ಸಾಮಾನ್ಯವಾಗಿ ನಡೆ ಯಲೇ ಬೇಕಾದ ದೈಹಿಕ ಕ್ರಿಯೆ. ಸ್ತ್ರೀಯು ಪ್ರಾಯಕ್ಕೆ ಬಂದಾಗ ಇದು ಪ್ರಾರಂಭವಾಗಿ ಆಕೆ ಪ್ರಾಯವನ್ನು ಕಳೆದುಕೊಂಡಾಗ ತಾನೇ ನಿಲ್ಲುತ್ತದೆ. ಮುಟ್ಟಾಗುವುದೆಂದರೆ ಗರ್ಭಾಶಯದ ಲೋಳಿಪರೆ ಕುಸಿಬಿದ್ದು ಕತ್ತರಿಸಿ ರಕ್ತದೊ ಡನೆ ವಿಸರ್ಜಿಸಲ್ಪಡುವುದು. ಹೀಗಾಗಲು ಕಾರಣವೆಂದರೆ ಸ್ತ್ರೀಯ ದೇಹದಲ್ಲಿಯ ಹಾರ್ಮೋನುಗಳ ಪ್ರಭಾವ. “ಇಸ್ಟ್ರೋಜಿನ್” ಎಂಬ ಹಾರ್ಮೋನ್ ಲೋಳಿ

ಪರೆಯನ್ನು ಬೆಳೆಸುತ್ತದೆ. "ಪ್ರೊಜೆಸ್ಟ್ರಾನ್" ಎಂಬುದು ಲೋಳೆಪರೆಯು ಸಕ್ರಿಯವಾಗಿ ಲೋಳೆಯನ್ನು ಸ್ರವಿಸುವಂತೆ ಮಾಡುತ್ತದೆ. ಇಂತಹ ಲೋಳೆ ಪರೆ ಭ್ರೂಣವನ್ನು ಸ್ವಾಗತಿಸಿ ಅದು ತನ್ನಲ್ಲಿ ಬೆಳೆಯುವಂತೆ ಎಲ್ಲಾ ತಯಾ ರಿಗಳನ್ನು ನಡೆಸಿರುತ್ತದೆ. ಆದರೆ ಪ್ರತಿಸಲವೂ ಭ್ರೂಣವು ತಯಾರಾಗು ವುದಿಲ್ಲ. ಆಗ "ಪ್ರೊಜೆಸ್ಟ್ರಾನ್" ಹಾಗೂ "ಇಸ್ಟ್ರೋಜನ್" ಹಾರ್ಮೋನು ಗಳೆರಡು ಒಮ್ಮೆಲೆ ಕುಸಿಯುತ್ತದೆ. ಆದ್ದರಿಂದ ಲೋಳೆಪರೆಯು ಕುಸಿಯು ವುದು ನಶಿಸುವುದು ಹಾಗೂ ತುಂಡುತುಂಡಾಗಿ ಕಳಚಿ ಬೀಳುವುದು. ಹೀಗೆ ಬೀಳುವಾಗ ಲೋಳೆಪರೆಯಲ್ಲಿ ರಕ್ತವಾಹಿನಿಗಳು ಹರಿದುಕೊಂಡು ಅವುಗಳಿಂದ ರಕ್ತ ಸ್ರವಿಸುವುದು. ಮೂರು ನಾಲ್ಕು ದಿನಗಳಲ್ಲಿ ಮೇಲ್ಭಾಗದ ಲೋಳೆಪರೆ ಯೆಲ್ಲವೂ ಕಳಚಿ ಹೋಗುವುದು. ನಂತರ ಮತ್ತೆ ರಕ್ತದಲ್ಲಿ ಇಸ್ಟ್ರೋಜನ್ ಪ್ರವಹಿಸತೊಡಗುವುದು. ಆಗ ತಳಭಾಗದಲ್ಲಿ ಉಳಿದುಕೊಂಡು ಲೋಳೆಪರೆಯ ಜೀವಕಣಗಳು ಬೆಳೆಯುತ್ತ ಹೋಗುತ್ತವೆ. ಮತ್ತೆ ಮುಟ್ಟಿನ ಚಕ್ರ ಪ್ರಾರಂಭ ವಾಗುತ್ತದೆ. ಒಂದುವೇಳೆ ಭ್ರೂಣವು ಲೋಳೆಪರೆಯಲ್ಲಿ ಬೇರೂರಿ ನಿಂತರೆ ಲೋಳೆಪರೆ ಕಳಚಿ ಬೀಳುವದಿಲ್ಲ ಹಾಗೂ ಗರ್ಭ ಬೆಳೆಯುತ್ತ ಹೋಗುತ್ತದೆ; ಇದು ಸಂಕ್ಷಿಪ್ತದಲ್ಲಿ ಮುಟ್ಟಿನ ಮುಟ್ಟಾಗುವ ಸಂಬಂಧದ ಪರಿಚಯ.

**ಅಗಬಹುದಾದ ಹಾನಿ :**

ಮುಟ್ಟಾದ ಸ್ತ್ರೀಯನ್ನು ಈ ರೀತಿಯಲ್ಲಿ ನಡೆಸಿಕೊಳ್ಳುವುದೇ ಒಂದು ಅಪರಾಧ. ಆಕೆಯ ಮನಸ್ಸಿನ ಮೇಲೆ ಒಂದು ಆಘಾತ. ಸಂಪ್ರದಾಯಸ್ಥ ಮನೆತನದಲ್ಲಿ ಇದ್ದ ಸ್ತ್ರೀ ವೈದ್ಯರೂ ಈ ನಡವಳಿಕೆಯಿಂದ ಮುಕ್ತರಾಗಿಲ್ಲ. ಅವರನ್ನು ನೇರವಾಗಿ ಕೇಳಿದರೆ ತಮ್ಮ ಅಸಂತೋಷವನ್ನು ಧಾರಾಳವಾಗಿ ಹೊರಗೆಡುಹುತ್ತಾರೆ. ಎರಡನೆಯದಾಗಿ ಸ್ತ್ರೀಯನ್ನು ನಾವು ಚಳಿ, ಬಿಸಿಲು, ಮಳೆಗಳಿಗೆ ನೇರವಾಗಿ ಒಡ್ಡುವುದರಿಂದ ಆಕೆಯು ರೋಗನಿರೋಧಕ ಶಕ್ತಿಯನ್ನೇ ಕಳೆದುಕೊಂಡು ಹಲವಾರು ತೊಂದರೆಗಳಿಗೆ ಆಹುತಿಯಾಗಬಹುದು. ಚಿಕ್ಕ ಮಕ್ಕಳಿದ್ದರೆ ಅವರ ಆರೈಕೆಯಲ್ಲಿ ಕುಂದು ಬಂದು ಅವು ಸಹ ತೊಂದರೆಯಲ್ಲಿ ಸಿಲುಕಬಹುದು. ಮುಟ್ಟಾದ ಸ್ತ್ರೀಗೆ ಮತ್ತೆ ಬೇರೆ ತೊಂದರೆಗಳು ಬರಬಹುದು.

### ಸೂಚನೆ

ಈ ಪದ್ಧತಿಯನ್ನು ಸಂಪೂರ್ಣವಾಗಿ ನಿಲ್ಲಿಸಬೇಕು. ಸಂಪ್ರದಾಯಸ್ತರಿಗೆ ವೈಜ್ಞಾನಿಕ ತಿಳುವಳಿಕೆಯನ್ನು ಕೊಡಬೇಕು. ವೈದ್ಯರು ಹಾಗೂ ವಿಜ್ಞಾನಿಗಳು ತಮ್ಮ ಮನೆಯಲ್ಲಿ ಕನಿಷ್ಠ ಪಕ್ಷ ಇವನ್ನು ನಡೆಯಗೊಡಬಾರದು.

## ಮೊಲೆ ತೊಟ್ಟುಗಳ ಮರ್ದನ

### ನಂಬಿಕೆ

ಗರ್ಭಿಣಿ ಸ್ತ್ರೀಯ ಮೊಲೆ ತೊಟ್ಟುಗಳು ಮಗು ಹಾಲುಣ್ಣಲು ಅನುಕೂಲ ವಾಗುವಂತೆ ದೊಡ್ಡದಾಗಿರಬೇಕು. ಹಾಗೂ ಹೊರಚಾಚಿಕೊಂಡಿರಬೇಕು ಎಂಬುದು ಒಂದು ನಂಬಿಕೆ. ಈ ನಂಬಿಕೆಯನ್ನು ಸಹ ಹುಟ್ಟಿಸುವವರು ಊರಲ್ಲಿರುವ ಸೂಲಗಿತ್ತಿಯರೆ. ಮೊಲೆ ತೊಟ್ಟುಗಳು ದೊಡ್ಡದಾಗಲು ಹಾಗೂ ನಿಮಿರಿಕೊಂಡು ನಿಲ್ಲಲು ಅವುಗಳನ್ನು ಸ್ನಾನ ಮಾಡುವಾಗ ಮರ್ದಿಸಬೇಕೆಂದೂ, ಅವುಗಳನ್ನು ಹಿಂಡಿ ಅವುಗಳಿಂದ ಹಾಲನ್ನು ಹೊರಗೆ ತೆಗೆಯಬೇಕೆಂದು ಬೋಧಿಸುವರು.

### ಆಚರಣೆ

ಈ ಸಂಗತಿಯನ್ನು ಕೇಳಿದ ಮಬಗ್ಭ ತಾಯಿ ಇವರು ಹೇಳಿದಂತೆ ಆಚರಿಸಲು ಪ್ರಾರಂಭಿಸುತ್ತಾಳೆ. ಸ್ನಾನ ಮಾಡಲು ಹೋದಾಗ ಆಕೆಯ ಕಾರ್ಯವನ್ನು ಯಾರೂ ನೋಡುವುದಿಲ್ಲ. ಸ್ನಾನದ ಮನೆಯಲ್ಲಿ ತೊಟ್ಟು ಗಳನ್ನು ಜಗ್ಗಿಕೊಳ್ಳುತ್ತ ಅವುಗಳನ್ನು ಮರ್ದಿಸುತ್ತ ಹಾಗೂ ಅವುಗಳಿಂದ ಹಾಲನ್ನು ಹಿಂಡುತ್ತ ಸ್ವಲ್ಪ ವೇಳೆ ಕಳೆಯುವಳು. ಆಕೆಗೆ ಒಂದೇ ಒಂದು ಸಂತಸವೆಂದರೆ ನಾಳೆ ತಾನು ಪ್ರಸವಿಸುವ ಮಗು ಸಾಕಷ್ಟು ಹಾಲು ಕುಡಿದು ದಷ್ಟಪುಷ್ಟವಾಗಿ ಬೆಳೆಯಬಹುದೆಂದು. ತನ್ನ ಕ್ರಿಯೆಯನ್ನು ದಿನಾಲೂ ಮಾಡುತ್ತ ಸ್ನಾನದ ಮನೆಯಿಂದ ಹೊರಗೆ ಬರುವಳು. ಯಾರಿಗೂ ಏನೂ ಗೊತ್ತಾಗದೆ ಹೋಗುವುದು.

## ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ

ಮೊಲೆತೊಟ್ಟುಗಳನ್ನು ಮರ್ದಿಸುವುದು, ಅವುಗಳಿಂದ ಹಾಲನ್ನು ಹಿಂಡಿ ತೆಗೆಯುವುದು ತೊಟ್ಟುಗಳನ್ನು ಹೊರಗೆ ಜಗ್ಗುವುದು, ಇತ್ಯಾದಿಗಳಲ್ಲಿ ಬಾಹ್ಯ ನೋಟಕ್ಕೆ ಯಾವ ತೊಂದರೆಯೂ ಇರಲಿಕ್ಕಿಲ್ಲವೆಂದು ತಿಳಿಯುತ್ತದೆ. ಆದರೆ ಅದರಿಂದಾಗುವ ಪ್ರಕ್ರಿಯೆಗಳು ಹಲವಾರು, ಮೊಲೆತೊಟ್ಟುಗಳ ಮರ್ದನದಿಂದ ಸ್ತ್ರೀಯು ಉತ್ತೇಜಿತಗೊಳ್ಳುತ್ತಾಳೆ. ಈ ಉತ್ತೇಜನವು ಪಿಟ್ಯುಟರಿ ಗ್ರಂಥಿಯ ಮೇಲೆ ನಡೆಯುತ್ತನೆ. ಇದರ ಪರಿಣಾಮವಾಗಿ ಗ್ರಂಥಿಯಿಂದ "ಆಕ್ಸಿಟೋಸಿನ್" ಎಂಬ ಹಾರ್ಮೊನು ಸ್ರವಿಸಲ್ಪಡುತ್ತದೆ. ಈ ಹಾರ್ಮೋನಿನ ಕಾರ್ಯವೆಂದರೆ ಗರ್ಭಾಶಯದ ಸ್ನಾಯುಗಳನ್ನು ಆಕುಂಚನಗೊಳಿಸುವುದು. ಗರ್ಭಾಶಯದ ಸ್ನಾಯುಗಳು ಆಕುಂಚನಗೊಳ್ಳುವುದೆಂದರೆ ಗರ್ಭದಲ್ಲಿಯ ಗರ್ಭವನ್ನು ಹೊರಹಾಕಲು ಪ್ರಯತ್ನಿಸುವದೇ ಎಂದು ಅರ್ಥ ಸ್ತ್ರೀಯು ತಾನು ಮೊಲೆ ತೊಟ್ಟುಗಳ ಮೇಲೆ ನಡೆಸುತ್ತಿರುವ ಮರ್ದನವು ಆಕೆಗೆ ಪೂರ್ಣ ದಿನ ತುಂಬುವ ಮೊದಲು ಆಗಿರುತ್ತದೆ. ಆ ವೇಳೆಯಲ್ಲಿ ಗರ್ಭಾಶಯವು ಹೆಚ್ಚು ಆಕುಂಚಗೊಂಡರೆ ಸ್ತ್ರೀಗೆ ಗರ್ಭಪಾತವೇ ಕೊನೆಯಾಗುವುದು. ಮುಗ್ಧ ತಾಯಿ ಮಗುವಿನ ಆಲೋಚನೆಯಲ್ಲಿಯೇ ಈ ಮೂಢ ನಂಬಿಕೆಗೆ ಒಳಗಾಗಿ ತನ್ನಿಂದ ತಾನೇ ತನಗರಿವಿಲ್ಲದಂತೆಯೇ ಗರ್ಭಪಾತಕ್ಕೆ ಎಡೆಮಾಡಿ ಕೊಡುವಳು, ಇಲ್ಲವೆ ದಿನ ತುಂಬುವುದಕ್ಕಿಂತ ಮೊದಲೇ ಪೂರ್ಣ ಬೆಳೆಯದ ಶಿಶುವಿಗೆ ಜನ್ಮ ಕೊಡುವಳು. ಇಂಥ ಶಿಶುಗಳು ಬದುಕುವುದು ಬಹಳ ಕಠಿಣ· ಇದರಿಂದ ಭ್ರೂಣಹತ್ಯೆಯು ಆದಂತಾಗುವುದು. ಆದ ಕಾರಣವೇ ಗರ್ಭಿಣಿಯರಿಗೆ ಈ ಮೂಢನಂಬಿಕೆಯ ಬಗ್ಗೆ ಸರಿಯಾದ ವಿವರಗಳನ್ನು ಕೊಟ್ಟು ಹೀಗಾಗದಂತೆ ನೋಡಿಕೊಳ್ಳಬೇಕು.

# ಗಿಣ್ಣದ ಹಾಲು ದೇಹಕ್ಕೆ ಅಪಾಯ ಮತ್ತು ಪಚನಕ್ಕೆ ಭಾರ

### ನಂಬಿಕೆ

ಕೆಲ ಸೂಲಗಿತ್ತಿಯರು ತಮ್ಮ ಕೆಲಸ ಮುಗಿದ ತಕ್ಷಣ ಬಾಣಂತಿಯರಿಗೆ ಇನ್ನೊಂದು ಕಿವಿಮಾತನ್ನು ಹೇಳಿಹೋಗಿರುತ್ತಾರೆ. ಅದೆಂದರೆ ಮೊದಲಿನ ದಿನ ಮೊಲೆಯಿಂದ ಸ್ರವಿಸುವ ಹಾಲು ಗಿಣ್ಣದ ಹಾಲೂ ಅದು ಬಹಳ ಗಟ್ಟಿಯಾಗಿರುತ್ತದೆ ಅನೇಕ ಸಲ ಅದು ಕಶ್ಮಲಗೊಂಡಿರುತ್ತದೆ. ಅಂದರೆ ಹಳಸಿರುತ್ತದೆ. ಕಾರಣವೇ ಅದರ ವರ್ಣ ಬೆಳ್ಳಗಾಗಿರದೆ ಹಳದಿ ಆಗಿರುತ್ತದೆ. ಇಂತಹ ಹಾಲು ಅದೇ ಹುಟ್ಟಿದ ಮಗುವಿಗೆ ಪಚನಕ್ಕೆ ಭಾರ ಹಾಗೂ ಮಗುವು ಒಂದು ವೇಳೆ ಕುಡಿದರೆ ಅದರ ಹೊಟ್ಟೆ ಜಾಡಿಸುತ್ತದೆ ಎಂದು ಹೇಳುವರು. ಇದನ್ನು ನಂಬಿದ ತಾಯಿ ಅವರು ಹೇಳಿದ, ಉಪಚಾರವನ್ನು ನಡೆಸುತ್ತಾಳೆ.

### ಆಚರಣೆ

ಸೂಲಗಿತ್ತಿಯರಿಂದ ಕೇಳಿ ತಿಳಿದುಕೊಂಡು ಈ ಮಾಹಿತಿಯ ಆಧಾರದ ಮೇಲೆ ತಾಯಿ ತನ್ನ ಮಗುವಿಗೆ ಕೆಡುಕಾಗದಿರಲೆಂದು ಮೊಲೆಗಳನ್ನು ಹಿಂಡಿ ಮೊಲೆಯಲ್ಲಿ ಗಿಣ್ಣದ ಹಾಲನ್ನು ಚೆಲ್ಲುವಳು. ಹಾಲು ಶುಭ್ರವಾದ ಮೇಲೆಯೇ ಮಗುವಿಗೆ ಉಣಿಸುವಳು ಅಲ್ಲಿಯವರೆಗೆ ಮಗುವಿಗೆ ಜೇನುತುಪ್ಪವನ್ನು ಕೊಡುವರು.

### ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ

ಪ್ರಾರಂಭದಲ್ಲಿ ತಾಯಿಯ ಮೊಲೆಯಿಂದ ಬರುವ ಹಾಲು ಸ್ವಲ್ಪ ಗಟ್ಟಿಯಾಗಿಯೂ ಹಳದಿ ವರ್ಣದ್ದೂ ಇರುವುದು ನಿಜ. ಇದಕ್ಕೆ ಕಾರಣವೇನೆಂದರೆ ಈ ಹಾಲಿನಲ್ಲಿ ರೋಗನಿರೋಧಕ ಪ್ರೋಟೀನ್ ಪದಾರ್ಥಗಳು ಹೆಚ್ಚು ಸಾಂದ್ರವಾಗಿರುತ್ತವೆ. ಅವುಗಳಲ್ಲಿಯ ಒಂದು ಘಟಕವು ಹಳದಿ ವರ್ಣದ್ದು ಇರುತ್ತದೆ ಕಾರಣ ಈ ಹಾಲಿಗೆ ಗಿಣ್ಣದ ಹಾಲೆಂದು ಹೇಳು

ವರು. ಈ ಹಾಲು ಶಿಶುವಿಗೆ ಅತ್ಯಾವಶ್ಯಕ ಇದನ್ನು ಶಿಶುವು ಕುಡಿಯಲೇ ಬೇಕು. ಇದನ್ನು ಕುಡಿಯುವುದರಿಂದ ಶಿಶುವಿನಲ್ಲಿ ರೋಗನಿರೋಧಕ ಶಕ್ತಿ ಬಲಗೊಳ್ಳುತ್ತದೆ. ಹಲವಾರು ರೋಗಗಳು ಶಿಶುವನ್ನು ಸೋಂಕದಂತೆ ಈ ಹಾಲಿನಲ್ಲಿಯ ಘಟಕಗಳು ರಕ್ಷಿಸುತ್ತವೆ. ಕಾರಣ, ತಾಯಿಯ ಗಿಣ್ಣದ ಹಾಲು ಮಗುವಿಗೆ ಅತ್ಯಾವಶ್ಯಕ. ಅದನ್ನು ನಾವು ಕೊಡದೇ ಹೋದರೆ ಮಗುವಿನ ರೋಗ ನಿರೋಧಕ ಶಕ್ತಿಯನ್ನು ಕುಂದಿಸಿದಂತಾಗಿ ಮಗುವು ರೋಗದಿಂದ ಬಳಲುವಂತೆ ಮಾಡಿದಂತಾಗುತ್ತದೆ. ಈ ಸಂಗತಿಯನ್ನು ವೈಜ್ಞಾನಿಕವಾಗಿ ಖಚಿತಪಡಿಸಲಾಗಿದೆ. ಕಾರಣ ಬಾಣಂತಿಯರಲ್ಲಿ ಈ ಮೂಢನಂಬಿಕೆ ಬರ ದಂತೆ ಕಾಳಜಿವಹಿಸಬೇಕು.

## 4) ಶಿಶುವಿನ ಸಂಬಂಧಿತ ಮೂಢ ಆಚಾರಗಳು

### ನಂಬಿಕೆ

ಶಿಶುವು ಮೊಲೆಹಾಲನ್ನು ಉಣ್ಣುವುದಕ್ಕಿಂತ ಮೊದಲು ತನ್ನ ಕರುಳನ್ನು ನಿರ್ಮಲಗೊಳಿಸಬೇಕು. ಕರುಳಲ್ಲಿ ಮಲೆತ ಮಲವು ಹೊರಬರಬೇಕಾದರೆ ಹುಟ್ಟಿದ ಕಂದಮ್ಮನಿಗೆ ಔಡಲ ಎಣ್ಣೆಯನ್ನು ಕುಡಿಸಬೇಕು.

### ಆಚರಣೆ

ಮೇಲಿನ ನಂಬಿಕೆಗೆ ಒಳಗಾದವರು ಕೂಸು ಹುಟ್ಟಿದ ತಕ್ಷಣ ನೇರ ವಾಗಿ ಅಂಗಡಿಗಳಿಗೆ ಹೋಗಿ ಒಂದು ಬಾಟಲಿ ಔಡಲ ಎಣ್ಣೆಯನ್ನು ಖರೀದಿಸುತ್ತಾರೆ ಹಾಗೂ ಬಹಳ ಶ್ರದ್ಧೆಯಿಂದ ಒಂದೆರಡು ಚಮಚ ಕೂಸಿಗೆ ಕುಡಿಸುತ್ತಾರೆ. ಔಡಲ ಎಣ್ಣೆಯ ಕುಡಿಸುವಿಕೆ ಒಂದೇ ಸಲ ಇರಬಹುದು. ಇನ್ನೂ ಕೆಲವರು ಅದನ್ನು ಒಂದೆರಡು ದಿನಗಳವರೆಗೂ ನಡೆಸಬಹುದು.

### ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ

ಔಡಲ ಎಣ್ಣೆ ಕರುಳಿನ ಲೋಳೆ ಪರೆಯ ಮೇಲೆ ತನ್ನ ಕಾರ್ಯನಡೆಸಿ ಲೋಳೆಪರೆ ಉರಿಯುತಣೆ ಹೊಂದುವಂತೆ ಮಾಡಿ ನಾಳರಂಧ್ರವಲ್ಲಿರುವ ಎಲ್ಲ

ಸ್ರವಿಕೆಗಳನ್ನು ಹೊರದೂಡುವುದು ನಿಜ. ಹೀಗೆ ಮಾಡುವುದರಿಂದ ಕರುಳಿನ ಕಶ್ಮಲವನ್ನೆಲ್ಲ ಕಳೆದು ಅದು ಸ್ವಚ್ಛಗೊಳ್ಳುವುದರಲ್ಲಿಯೂ ಸಂದೇಹವಿಲ್ಲ. ಆದರೆ ಅದೇ ಹುಟ್ಟಿದ ಕೂಸುಗಳಲ್ಲಿ ಔಡಲ ಎಣ್ಣೆಯ ಪ್ರಭಾವವು ಒಂದೊಂದು ಸಲ ವಿಪರೀತ ತೊಂದರೆಯನ್ನು ತರುವುದು. ಲೋಳೆಪರೆಯ ಉರಿಯುತಣೆ ಉಗ್ರವಾದರೆ ಕರುಳು ಕಾರ್ಯಹೀನವಾಗುವುದು. ಅಂದರೆ ಅದರ ಸಾಮಾನ್ಯ ಚಲನೆಯೇ ನಿಂತುಬಿಡುವುದು. ಇದನ್ನು ಆಂಗ್ಲ ಭಾಷೆಯಲ್ಲಿ Paralytic ileus ಎಂದು ಹೇಳುವರು. ಹೀಗಾಗುವುದರಿಂದ ಕೂಸಿನ ಉದರವು ಉಬ್ಬಿಕೊಂಡು ಕೂಸು ವಾಂತಿಮಾಡುತ್ತ ಮರಣವನ್ನು ಹೊಂದಬಹುದು. ಕಾರಣವೇ ಅದೇ ಹುಟ್ಟಿದ ಕೂಸಿಗೆ ಔಡಲ ಎಣ್ಣೆಯನ್ನು ಕುಡಿಸುವುದು ಅನಾಹುತಕ್ಕೆ ದಾರಿಮಾಡಿಕೊಟ್ಟಂತೆಯೇ. ಇದನ್ನು ತಪ್ಪಿಸುವುದು ವೈದ್ಯರ ಕರ್ತವ್ಯ.

ಕೆಲವೊಮ್ಮೆ ಔಡಲ ಎಣ್ಣೆಯು ಅನ್ನನಾಳದಲ್ಲಿ ಸೇರಿಕೊಳ್ಳದೆ ಶ್ವಾಸನಾಳದಲ್ಲಿ ಸೇರುವ ಸಂಭವವಿದೆ. ಇವರಿಂದ ಎಣ್ಣೆ ನೇರವಾಗಿ ಗಾಳಿಗೂಡುಗಳಲ್ಲಿ ಸೇರಿಕೊಂಡು ನ್ಯುಮೋನಿಯಾ (Aspiration of Pneumonia) ರೋಗವನ್ನು ಶಿಶುವಿನಲ್ಲಿ ತರುವುದು. ಹೀಗೆ ಹುಟ್ಟಿದ ಪುಪ್ಪುಸ ಉರಿಯ ತಣೆಯೇ ಮಗುವಿನ ಪ್ರಾಣವನ್ನು ತೆಗೆಯಬಲ್ಲದು. ಗಾಳಿಗೂಡುಗಳಲ್ಲಿ ಸೇರಿಕೊಂಡ ಔಡಲ ಎಣ್ಣೆಯನ್ನು ತೆಗೆಯುವುದು ಅಸಾಧ್ಯ.

# ಮಚ್ಚೆ ಹಾಗೂ ಸುಳಿಗಳನ್ನು ಸುಡುವುದು

**ನಂಬಿಕೆ**

ಮಗುವು ಹುಟ್ಟಿದಾಗ ಅದರ ಚರ್ಮದ ಮೇಲೆ ಕೆಲವು ಸಲ ನೀಲಿ ವರ್ಣದ ಇಲ್ಲವೆ ಕಪ್ಪು ವರ್ಣದ ಮಚ್ಚೆ ಅಥವಾ ಸುಳಿಗಳು ಇರುವುದು ಸಾಧ್ಯ. ಇನ್ನೂ ಕೆಲವು ಕೂದಲುಗಳ ಸುಳಿಗಳು ಚರ್ಮದಲ್ಲಿ ಗೋಚರಿಸುವವು. ಇಂತಹ ಮಚ್ಚೆಯನ್ನಾಗಲಿ ಸುಳಿಗಳನ್ನಾಗಲಿ ಕಂಡ ಜನರು ಆ ಸುಳಿ ಅಥವಾ ಮಚ್ಚೆ ಮನೆತನಕ್ಕೆ ಕೆಡಕೆಂದೂ ಮುಂದಿನ ಭವಿಷ್ಯಕ್ಕೆ ಹಾನಿಯೆಂದೂ ಹೇಳಿ ಅದನ್ನು ತಕ್ಷಣವೇ ಸುಟ್ಟುಬಿಡಬೇಕೆಂದು ಸೂಚಿಸುವರು.

**ಆಚರಣೆ**

ಮಗುವಿನ ದೇಹದ ಮೇಲೆ ಕಂಡ ಸುಳಿ ಅಥವಾ ಮಚ್ಚೆಗಳನ್ನು ಸುಡಲಿಕ್ಕೆ ಆ ಊರಿನ ಗ್ರಾಮ ದೇವತೆಯಾದ ದ್ಯಾಮವ್ವನೋ ಕಾಳವ್ವನೋ ತನ್ನ ಬಳೆಯನ್ನಾಗಲೀ, ತಾಳಿಯನ್ನಾಗಲೀ ಕೊಡಬೇಕು. ಈ ಲೋಹದ ವಸ್ತುಗಳನ್ನು ತಂದು ಅವು ಕೆಂಪಗಾಗುವಂತೆ ಕಾಸಿ ಹಸುಳೆಯ ಮೈಮೇಲಿರುವ ಸುಳಿಯನ್ನಾಗಲೀ, ಕಲೆಯನ್ನಾಗಲೀ ಸುಟ್ಟುಹಾಕುವರು. ಸುಟ್ಟ ಗಾಯದ ಮೇಲೆ ಆ ದೇವಿಯ ಭಸ್ಮವನ್ನು, ಆ ಗುಡಿಯಲ್ಲಿಯ ಧೂಳನ್ನು ತಂದು ಹಾಕುವರು.

**ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ**

ಚರ್ಮದಲ್ಲಿ ತೋರಬಹುದಾದ ಮಚ್ಚೆ ಸುಳಿಗಳು ಅಸ್ವಾಭಾವಿಕವೆಂದೇನು ಅಲ್ಲ. ಅವು ಸ್ವಾಭಾವಿಕವೇ. ಅವುಗಳಿಂದ ಏನೂ ಆಗದು ಇಲ್ಲದ ವಿಚಾರ ಮಾಡಿ ಜನರು ಅವುಗಳ ಬಗ್ಗೆ ಭೀತಿಪಟ್ಟು ಅವುಗಳನ್ನು ಸುಡುತ್ತಾರೆ. ಸುಟ್ಟು ಬಿಟ್ಟರೆ ಅಪಾಯ ಕಡಿಮೆ ಆದರೆ ಸುಟ್ಟಗಾಯದ ಮೇಲೆ ಅಂಗಾರ ಹಾಕುವುದು. ದೇವಿಯ ಧೂಳನ್ನು ಹಾಕುವುದು ಎಂದರೆ ಗಾಯಗಳನ್ನು ಹಲವಾರು ರೋಗಾಣುಗಳಿಂದ ಕಶ್ಮಲಗೊಳಿಸುತ್ತಾರೆ. ಹೀಗೆ ಕಶ್ಮಲಗೊಂಡ ಗಾಯಗಳು ಶಿಶುವಿನಲ್ಲಿ ಹಲವಾರು ರೋಗಗಳನ್ನು ಹುಟ್ಟಿಸಿ ಶಿಶುವಿನ ಜೀವ ಹರಣ ಮಾಡಲು ಸಾಧ್ಯವಿದೆ. ಹೀಗೆ ಬರುವ ರೋಗಗಳಲ್ಲಿ "ಟಿಟಾನಸ್" ಬಂದರೆ ಮರಣವೊಂದೇ ಉತ್ತರ.

# ಹೊಟ್ಟೆನೋವಿಗೆ ಸಂಬಂಧಿತ ಮೂಢ ಆಚಾರಗಳು

## 1) "ಬಟ್ಟೆ ಸರಿಯುವುದು"

**ನಂಬಿಕೆ**

ಪ್ರಾಯದ ಸ್ತ್ರೀಯರಲ್ಲಿ ಹೊಟ್ಟೆನೋವು ಪ್ರಾರಂಭವಾದರೆ ಆ ಸ್ತ್ರೀಗೆ "ಬಟ್ಟೆ" ಸರಿದಿದೆ ಎಂದು ಹೇಳುವರು. ಈ ಸಂಗತಿಯನ್ನು ನಿದಾ

ನಿಸುವರು. ಮನೆಯಲ್ಲಿ ಅಜ್ಜಿಯರು ಇಲ್ಲವೆ ವಯಸ್ಸಿನ ಸ್ತ್ರೀಯರು. ಅವರಿಗೂ ಇದು ತಿಳಿದದ್ದು ಹಿರಿಯರಿಂದಲೇ. ಈ ನಂಬಿಕೆಯ ಪ್ರಕಾರ ಸ್ತ್ರೀಯು ಏನಾದರೂ ಭಾರವನ್ನು ಎತ್ತಿದರೆ, ಏನಾದರೂ ಹೆಚ್ಚು ಕೆಲಸ ವನ್ನು ಮಾಡಿದರೆ ಆಕೆಯ ಹೊಟ್ಟೆಯಲ್ಲಿರುವ ಒಂದು ಗಂಟು ತನ್ನ ಸ್ಥಳದಿಂದ ಬೇರೆ ಕಡೆಗೆ ಸರಿಯುತ್ತದೆ ಎಂದು ಅರ್ಥ. ಈ ಗಂಟಿಗೆ ಅವರು ಬಟ್ಟೆ ಎನ್ನುವರು. ಬಟ್ಟೆ ತನ್ನ ಮೊದಲಿನ ಸ್ಥಳಕ್ಕೆ ಬಂದು ತಲುಪಿದರೆ ಸ್ತ್ರೀಯ ಹೊಟ್ಟೆನೋವು ತನ್ನಿಂದತಾನೆ ಕಡಿಮೆಯಾಗುವದು ಎಂದು ಅವರ ತಿಳುವಳಿಕೆ.

**ಆಚರಣೆ**

ಹೊಟ್ಟೆ ನೋವಿರುವ ಸ್ತ್ರೀ ಬಟ್ಟೆ ಸರಿದಿದೆ ಎಂದು ಒಪ್ಪಿಕೊಂಡರೆ ಆಯಿತು ಆಕೆಯ ಸರಿದ ಬಟ್ಟೆಯನ್ನು ಮೂಲಸ್ಥಳಕ್ಕೆ ತರುವ ಜವಾಬ್ದಾರಿ ಇನ್ನುಳಿದ ಹೆಂಗಸರದು. ಬಟ್ಟೆ ತನ್ನ ಮೂಲಸ್ಥಾನಕ್ಕೆ ಬರುವಂತೆ ಮಾಡಲು ಹಲವಾರು ಸ್ವಾರಸ್ಯಕರ ಉಪಾಯಗಳನ್ನು ಮಾಡುವರು. ಒಂದೊಂದು ಭಾಗ ದಲ್ಲಿ ಒಂದೊಂದು ಉಪಚಾರ ನಡೆಯುವುದು. ಉಪಚಾರ ಮಾಡುವ ಹೆಂಗ ಸರಿಗೆ ಬಟ್ಟೆ ತಿಕ್ಕುವವರು ಎಂದೇ ಹೆಸರು. ಮೊದಲನೆಯ ಪ್ರಕಾರದ ಉಪಚಾರದಲ್ಲಿ ನೋವಿನಿಂದ ಬಳಲುತ್ತಿರುವ ಸ್ತ್ರೀಯನ್ನು ಅಂಗಾತ ಮಲ ಗಿಸುವರು. ಮನೆಯಲ್ಲಿಯ ದೊಡ್ಡ ಒನಿಕೆಯನ್ನು ತಂದು ಆಕೆಯ ಹೊಕ್ಕು ಳದ ಮೇಲಿಟ್ಟು ಜೋರಾಗಿ ಅದುಮುವರು. ಸ್ತ್ರೀಯು ನೋವಿನಿಂದ ವಿಲಿವಿಲಿ ಒದ್ದಾಡಿದರೂ ನಾಲ್ಕೈದು ಜನ ಆಕೆಯ ಕೈಕಾಲುಗಳನ್ನು ಹಿಡಿದು ಬಟ್ಟೆ ಯನ್ನು ಮೂಲಸ್ಥಾನಕ್ಕೆ ತರುವವರೆಗೆ ಬಿಡುವದೇ ಇಲ್ಲ.

ಬಟ್ಟೆ ಮೂಲಸ್ಥಾನಕ್ಕೆ ಸರಿದಿದೆ ಎಂದು ಇವರಿಗೆ ತಿಳಿಯುವ ಬಗೆ ಎಂದರೆ ಹೊಟ್ಟೆಯಿಂದ ಗುಟುರು ಹಾಕಿದ ಶಬ್ದ ಕೇಳಿರಬೇಕು. ಆಗ ತಮ್ಮ ಉಪಚಾರವನ್ನು ನಿಲ್ಲಿಸುವರು.ಇನ್ನೊಂದು ನಿಧಾನದ ಉಪಚಾರದಲ್ಲಿ ಹೆಚ್ಚು ಅನುಭವಸ್ಥ ಸ್ತ್ರೀಯು ನೋವಿನಿಂದ ಬಳಲುವ ಸ್ತ್ರೀಯನ್ನು ಅಂಗಾತ ಮಲ ಗಿಸಿ ಬಿಸಿ ಎಣ್ಣೆಯನ್ನು ಹೊಟ್ಟೆಯ ಮೇಲೆ ಲೇಪಿಸಿ ಪ್ರಾರಂಭದಲ್ಲಿ ಮೆಲ್ಲಗೆ

ಒತ್ತಿ ಒತ್ತಿ ಪರೀಕ್ಷಿಸುವಳು. ಆಕೆ ಪರೀಕ್ಷಿಸುವಾಗ ಹೊಕ್ಕುಳದಿಂದ ದೂರ ದಲ್ಲಿರುವ ಏನೋ ಒಂದು ಗಂಟು ಆಕೆ ತಿಕ್ಕಿನೆಕ್ಕಿ ಹೊಕ್ಕಳ ಕಡೆಗೆ ಸರಿಸಲು ಪ್ರಯತ್ನಿಸುವಳು. ತನ್ನ ಎರಡೂ ಕೈಗಳನ್ನು ಒತ್ತಿ ಇದ್ದ ಶಕ್ತಿಯನ್ನೆಲ್ಲ ಉಪಯೋಗಿಸಿ ಆ ಗಂಟನ್ನು ಹೊಕ್ಕಳ ಕಡೆಗೆ ನೂಕುವಳು. ಇದು ಮಲಗಿರುವ ಸ್ತ್ರೀಗೆ ಸಹಿಸಲಾರದಷ್ಟು ನೋವನ್ನುಂಟುಮಾಡುವುದು. ಆದರೆ ಅನುಭವಿ ಹೆಣ್ಣು ಮಗಳು ತನ್ನ ಸಾಹಸವನ್ನು ಮುಂದುವರಿಸುವಳೇ ವಿನಾ ಅರ್ಧಕ್ಕೆ ಬಿಡಳು. ಆಕೆ ತಿಕ್ಕುತ್ತಿರುವ ಗಂಟ್ಟು ತನ್ನ ಸ್ಥಳದಿಂದ ಮಾಯ ವಾದರೆ ಉಪಚಾರ ಮುಗಿದಂತೆ.

## ವೈಜ್ಞಾನಿಕ ಹಿನ್ನೆಲೆ ಮತ್ತು ಹಾನಿ

ಒಂದು ರೀತಿಯಿಂದ ನೋಡಿದರೆ ವೈದ್ಯರಿಗೆ ಬಟ್ಟಿ ಎಂಬ ಶಬ್ದವೇ ಗೊತ್ತಿಲ್ಲ. ಏನಾದರೂ ಭಾರವನ್ನು ಎತ್ತಿದಾಗ ಉದರದಲ್ಲಿರುವ ಯಾವುದೇ ಗಂಟು ಬದಿಗೆ ಸರಿಯುವುದಿಲ್ಲ. ಯಾವ ಗಂಟನ್ನೂ ನಾವು ಒನಿಕೆಯಿಂದ ಒತ್ತಿ ಕೈಯಿಂದ ತಿಕ್ಕಿ ಸ್ಥಳಾಂತರಿಸಲು ಸಾಧ್ಯವಿಲ್ಲ. ಇದು ವೈದ್ಯ ಶಾಸ್ತ್ರದ ತಿಳಿವಳಿಕೆ. ಭಾರವನ್ನು ಎತ್ತಿದಾಗ ಉದರ ಸ್ನಾಯುಗಳು ಹೆಚ್ಚು ಆಕುಂಚನ ಹೊಂದಿ ಇಲ್ಲವೆ ಹಿಚಿಕಿದಂತಾಗಿ ಸ್ವಲ್ಪ ನೋವು ಕಾಣಿಸಲು ಸಾಕು. ಆದರೆ ಬಟ್ಟಿ ಎಂಬ ವಸ್ತುವೇ ಇಲ್ಲ. ಇನ್ನೂ ಕೋಮಲವಾದ ಸ್ತ್ರೀಯ ಉದರ ವನ್ನು ಒನಿಕೆಯಿಂದ ಒತ್ತುವುದಾಗಲೀ ಪೂರ್ಣ ಶಕ್ತಿಯಿಂದ ತಿಕ್ಕುವುದರಿಂದಾ ಗಲೀ ಒಂದೇ ಒಂದು ಸಂಗತಿಯನ್ನು ನಾವು ಸಾಧಿಸಬಹುದು. ಅದೆಂದರೆ ಸಣ್ಣ ಕರುಳನ್ನು ಹಿಚಿಕಿ ಹರಿಯುವುದು. ಒಂದು ವೇಳೆ ಕರುಳು ಹರಿದರೆ ಸ್ತ್ರೀಗೆ ಭಯಂಕರ ಉದರ ಪೊರೆ ಉರಿಯತಣೆ ಆಗಿ ಆಕೆ ಮರಣ ಹೊಂದಬಹುದು. ಇಲ್ಲವಾದರೆ ಗಾಸಿಗೊಂಡ ಕರುಳುಗಳು ಒಂದುಕ್ಕೊಂದು ಅಂಟಿಕೊಂಡು ತೊಡಕಾಗಬಹುದು. ಕಾರಣವೆ ಸ್ತ್ರೀಯರಿಗೆ ಬಟ್ಟಿಯ ಬಗ್ಗೆ ತಿಳಿಸಿ ಹೇಳಿ ಅಂತಹ ವಸ್ತುವೇ ಇನ್ನೂ ಸಿಕ್ಕಿಲ್ಲವೆಂದು ಅವರಿಗೆ ಮನವರಿಕೆ ಮಾಡಿಕೊಡ ಬೇಕು.

## 2. ತಂಬಿಗೆ ಹಿಡಿಸುವುದು

### ನಂಬಿಕೆ

ಹೊಟ್ಟೆ ನೋವಿಗೆ ಬಟ್ಟಿ ಸರಿದಿದೆ ಎಂದು ನಂಬದವರು ಅಥವಾ ಬಟ್ಟಿ ತಿಕ್ಕುವ ತಂತ್ರ ಗೊತ್ತಿಲ್ಲದವರು ಇನ್ನೊಂದು ವಿಧಾನವನ್ನು ಆಚರಿಸುತ್ತಾರೆ. ಅದೆಂದರೆ ಹೊಟ್ಟೆಯು ಮೇಲೆ ತಂಬಿಗೆ ಹಿಡಿಸುವುದು. ತಂಬಿಗೆ ಹಿಡಿಸುವುದರಿಂದ ಆ ಭಾಗದ ಉದರ ಬಿತ್ತಿಯು ತಂಬಿಗೆಯಲ್ಲಿ ಸ್ವಲ್ಪ ಮಟ್ಟಿಗೆ ಹೀರಲ್ಪಟ್ಟು ನೋವಾಗುತ್ತದೆ. ಅದರ ಎಣಿಕೆಯಂತೆ ತಂಬಿಗೆ ಹಿಡಿಸುವುದರಿಂದ ಸ್ತ್ರೀಯ ಹೊಟ್ಟೆನೋವು ಶಮನಗೊಳ್ಳುವುದು.

### ಆಚರಣೆ

ಈ ವಿಧಾನ ಕೇವಲ ಭಾರತೀಯರಲ್ಲಿಯೇ ಮಾತ್ರ ಎಂದು ಹೇಳಲಾಗದು. ಹಲವಾರು ಪಾಶ್ಚಿಮಾತ್ಯ ದೇಶಗಳಲ್ಲಿ ಈ ವಿಧಾನವನ್ನು ಆಚರಿಸುತ್ತಿದ್ದರು. ಆಂಗ್ಲಭಾಷೆಯಲ್ಲಿ ಈ ವಿಧಾನಕ್ಕೆ (Cupping) ಎಂದು ಹೇಳುತ್ತಾರೆ. ಇಲ್ಲಿ ವ್ಯಕ್ತಿಯ ಹೊಟ್ಟೆಯ ಮೇಲೆ ಒಂದು ನಾಣ್ಯವನ್ನು ಇಡುತ್ತಾರೆ. ಆ ನಾಣ್ಯದ ಮೇಲೆ ಒಂದು ಸಣ್ಣ ಮೇಣಬತ್ತಿಯನ್ನು ನಿಲ್ಲಿಸುತ್ತಾರೆ. ನಾಣ್ಯದ ಸುತ್ತಲೂ ಎಣ್ಣೆ ಸವರಿ ಒಂದು ತಂಬಿಗೆಯನ್ನು ಇಲ್ಲವೆ ದೊಡ್ಡ ಬಟ್ಟಲನ್ನು ಉರಿಯುತ್ತಿರುವ ಮೇಣಬತ್ತಿಯ ಮೇಲೆ ಮುಚ್ಚುತ್ತಾರೆ. ಇದರಿಂದ ಮೇಣ ಬತ್ತಿಗೆ ಉರಿಯಲು ಹೊರಗಿನ ಹವೆಯು ದೊರೆಯದಂತಾಗಿ ತಂಬಿಗೆಯಲ್ಲಿಯೇ ಇರುವ ಹವೆಯನ್ನು ಉಪಯೋಗಿಸಿ ಉರಿಯುತ್ತದೆ. ಹವೆ ಮುಗಿದಾಗ ನಂದುತ್ತದೆ.

ತಂಬಿಗೆಯಲ್ಲಿಯ ಹವೆಯು ಮೇಣದ ಬತ್ತಿಯಿಂದ ಬಳಸಲ್ಪಟ್ಟಾಗ ಅಲ್ಲಿ ಅಲ್ಪಮಟ್ಟಿಗೆ ನಿರ್ವಾತು ಉಂಟಾಗುತ್ತದೆ. ನಿರ್ವಾತದಿಂದ ತಂಬಿಗೆ ಅಥವಾ ಬಟ್ಟಲು ಉದರಬಿತ್ತಿಯ ಚರ್ಮವನ್ನು ಹೀರಿಕೊಂಡು ಬಿಗಿಯಾಗಿ ಹಿಡಿಯುತ್ತದೆ. ಹೀಗೆ ಹಿಡಿದುಕೊಂಡ ತಂಬಿಗೆಯನ್ನಾಗಲೀ ಬಟ್ಟಲನ್ನಾಗಲೀ ಸುಲಭವಾಗಿ ಕೀಳಲು ಆಗುವುದಿಲ್ಲ. ಮುಂದೆ ಕೆಲಸಮಯದ ನಂತರ ಬಟ್ಟ

ಲಾಗಲೀ ತಂಬಿಗೆಯಾಗಲೀ ಸಡಿಲುಗೊಳ್ಳುವುದು. ಆಗ ಹೊಟ್ಟೆನೋವು ಹೋಗಿರುವುದೆಂದು ಹೊಟ್ಟೆಯೊಳಗಿನ ತೊಂದರೆ ಮಾಯವಾಗಿರುವುದೆಂದು ನಂಬಿಕೆ.

### ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ

ಹೀಗೆ ತಂಬಿಗೆಯನ್ನು ಹಿಡಿಸುವುದರಿಂದಾಗಲೀ ಬಟ್ಟಲನ್ನು ಹಿಡಿಸುವುದರಿಂದಾಗಲೀ ಉದರದೊಳಗಿನ ಯಾವ ಅಂಗಕ್ಕೂ ಯಾವುದೇ ತರಹದ ಪರಿಣಾಮ ಆಗದು. ನೋವಿಗೆ ಕಾರಣವಾದ ಎಂತಹುದೇ ರೋಗವು ಈ ವಿಧಾನದಿಂದ ಕಡಿಮೆಯಾಗದು. ಕಾರಣ ಈ ಪದ್ಧತಿ ತಪ್ಪು ನಂಬಿಕೆಯ ಆಧಾರದ ಮೇಲೆ ನಿಂತಿದೆ ಎಂಬುದನ್ನೂ ಜನರು ತಿಳಿದುಕೊಳ್ಳಬೇಕು. ಅಕಸ್ಮಾತ್ತಾಗಿ ಮೊಂಬತ್ತಿ ಹೊರಳಿ ಹೊಟ್ಟೆಯ ಚರ್ಮವನ್ನು ಸುಡಲೂ ಸಾಧ್ಯ.

## 31 ಬರೆ ಕೊಡುವುದು

### ನಂಬಿಕೆ

ಹೊಟ್ಟೆನೋವು ಬರಬೇಕಾದರೆ ಊರ ದೇವತೆಯು ಆ ವ್ಯಕ್ತಿಯ ಮೇಲೆ ಸಿಟ್ಟಾಗಿರುವುದೆಂದು ನಂಬಿಕೆ ಈ ನೋವು ಕಡಿಮೆಯಾಗಬೇಕಾದರೆ ಆ ದೇವತೆಯ ಯಾವುದೇ ಒಂದು ಒಡವೆಯನ್ನು ತಂದು ಅದರಿಂದ ಹೊಟ್ಟೆ ನೋವಿರುವ ಸ್ಥಳವನ್ನು ಸುಡಬೇಕು. ಆಗ ದೇವತೆ ತನ್ನ ಸಿಟ್ಟನ್ನು ಶಮನಗೊಳಿಸಿಕೊಂಡು ಸಂತೃಪ್ತಳಾಗುವಳು ಹಾಗೂ ಹೊಟ್ಟೆನೋವನ್ನು ನಿಲ್ಲಿಸುವಳು.

### ಆಚರಣೆ

ಮೇಲಿನ ನಂಬಿಕೆಯನ್ನು ಹೇಳುವವರು ಊರಲ್ಲಿ ನೆಲೆಸಿರುವ ಬಡಜಿಗಳು ಇಲ್ಲವೆ ಊರದೇವತೆಯ ಪೂಜಾರಿಗಳು. ಅವರೇ ಈ ಬರೆಕೊಡುವ ಕಾರ್ಯವನ್ನು ನಡೆಸುವರು. ಇದಕ್ಕಾಗಿ ಹೊಟ್ಟೆನೋವು ಇದ್ದವರು ಪೂಜಾರಿಗಳಿಗೆ ಕಾಣಿಕೆ ಕೊಡಬೇಕು. ದೇವರಿಗೆ ಎಡೆ ಅರ್ಪಿಸಬೇಕು. ಇವೆರಡೂ ನಡೆದಾದ ಮೇಲೆ ಪೂಜಾರಿ, ತಾಯಿಯ ಮಂಗಳಸೂತ್ರ, ಬಳೆ, ಉಂಗುರ ಅಥವಾ ಆಕೆಯ ಮುಂದಿರುವ ಯಾವುದೇ ಒಂದು ಆಯುಧವನ್ನು ತೆಗೆದುಕೊಂಡು




ಬಂದು ಅದನ್ನು ಚೆನ್ನಾಗಿ ಬೆಂಕಿಗೆ ಹಿಡಿದು, ಕಾಸಿ ನೋವಿದ್ದ ಸ್ಥಳದಲ್ಲಿ ಬರೆಕೊಡುತ್ತಾನೆ. ಒಂದೇ ಒಂದು ಕೊಡಬೇಕೆಂದೇನೂ ಅಲ್ಲ, ಹತ್ತಾರು ಬರೆಗಳನ್ನು ಕೊಡುತ್ತಾನೆ. ಹೆಚ್ಚು ಬರೆಕೊಟ್ಟಂತೆ ಕಾಣಿಕೆ ಹೆಚ್ಚು ಸಿಗುತ್ತದೆ. ಅನ್ಮನಿಗೆ ಎಡೆ ಜಾಸ್ತಿ ಬರುತ್ತದೆ. ಬರೆ ಕೊಟ್ಟಾದ ಮೇಲೆ ಆ ಸ್ಥಳದಲ್ಲಿ ಆಕಳ ಸಗಣಿಯನ್ನೋ, ಅಮ್ಮನ ಮುಂದಿರವ ಧೂಳನ್ನೋ ಕುಂಕುಮವನ್ನೋ ಭಂಡಾರವನ್ನೋ ಬಳಿಯುತ್ತಾರೆ. ಇದನ್ನು ಮಾಡುವುದರಿಂದ ಕಡಿಮೆಯಾಗಲೇಬೇಕು ಎಂದು ಅವರ ವಾದ.

### ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ

ಈ ಪದ್ಧತಿಯು ಸಹ ಕೇವಲ ಭಾರತದಲ್ಲಿ ಮಾತ್ರ ಇತ್ತು ಎಂದೇನೂ ಅಲ್ಲ. ಬೇರೆ ಕೆಲವು ದೇಶಗಳಲ್ಲೂ ಅದು ಬಳಕೆಯಲ್ಲಿತ್ತು. ಹಾಗೆ ಅವರು ಯಾಕೆ ಆಚರಿಸಿದರು ಎಂಬುದು ಕಲ್ಪನೆಗೆ ಬಾರದು. ಬರೆಕೊಡುವುದರಿಂದ ಉದರದೊಳಗಿನ ಯಾವ ಅಂಗಾಂಗಕ್ಕೂ ಪರಿಣಾಮವಾಗದು. ಕಾರಣ ಯಾವುದೇ ಒಳ್ಳೆಯ ಪರಿಣಾಮ ಕಾಣುವುದಿಲ್ಲ. ಇನ್ನೂ ಬರೆಯಿಂದ ಉದರ ಬಿತ್ತಿಯೆಲ್ಲ ಗಾಯಗೊಂಡು ಆ ವ್ಯಕ್ತಿ ಮೊದಲಿನ ನೋವಲ್ಲದೆ ಹೊಸ ನೋವಿನಿಂದಲೂ ಬಳಲಬೇಕಾಗುತ್ತದೆ. ಗಾಯಗಳು ಬ್ಯಾಕ್ಟೀರಿಯಾ ಜೀವಿಗಳಿಂದ ಕಶ್ಮಲಗೊಂಡರೆ ಇನ್ನೂ ಹೆಚ್ಚು ಹಾನಿ ತಲುಪುತ್ತದೆ. ದೇವರ ಅಥವಾ ದೆವ್ವಗಳ ಸಿಟ್ಟಿನಿಂದ ನಮ್ಮ ದೇಹದ ಯಾವ ಯಾವ ಅಂಗಾಂಗವೂ ತೊಂದರೆಗೆ ಒಳಗಾಗುವದಿಲ್ಲ. ಕಾರಣ ಈ ಪದ್ಧತಿಯನ್ನು ತಡೆಯಲೇಬೇಕು.

## ಕಾಲ್ಪೂಳಿ ನಿವಾಳಿಸುವುದು

### ನಂಬಿಕೆ

ಚಿಕ್ಕ ಮಕ್ಕಳಲ್ಲಿ ಪ್ರಾಯದವರಲ್ಲಿ ಹೊಟ್ಟೆನೋವು ಪ್ರಾರಂಭವಾದರೆ ಮನೆಯಲ್ಲಿಯ ಯಜಮಾನಿ ಅವರಿಗೆ ಕಾಲ್ಪೂಳಿ ಆಗಿದೆ ಎಂದು ಚಿಂತಿಸುವಳು, ಹಾಗೂ ಅದರ ನಿವಾರಣೆಗೆ ಕೆಲವು ತಂತ್ರಗಳನ್ನು ಮಾಡುವಳು. ಈ

ತಂತ್ರದಿಂದ ಕಾಲ್ದೂಳಿ ಕಂಟಕ ತಪ್ಪಿ ಹೊಟ್ಟೆನೋವು ಕಡಿಮೆಯಾಗುವುದು ಎಂದು ಹೇಳುವರು.

**ಆಚರಣೆ**

ಹೊಟ್ಟೆನೋವಿನವರು ಊಟವಾದ ಮೇಲೆ ಅದೇ ಸ್ಥಳದಲ್ಲಿ ಕುಳಿತು ಕೊಳ್ಳಬೇಕು. ತಾವು ಉಂಡ ತಾಟಿನಲ್ಲಿಯೇ ಕೈತೊಳೆಯಬೇಕು. ಯಜಮಾನತಿ ಬಂದು ಬಟ್ಟಲನ್ನೋ, ತಂಬಿಗೆಯನ್ನೋ ತೆಗೆದುಕೊಂಡು ಅದರಲ್ಲಿ ಕೆಲವು ನಿಗಿನಿಗಿ ಅನ್ನುವ ಬೆಂಕಿಯ ಕೆಂಡಗಳನ್ನು ಹಾಕುವಳು. ನಂತರ ತಂಬಿಗೆಗೆ ಕಸಬರಿಗೆಯ ಕಡ್ಡಿಗಳನ್ನು, ಕೆಲವು ತಿನ್ನುವ ವಸ್ತುಗಳನ್ನು ಹಾಕಿ, ರೋಗಿಯ ತಲೆಗೊಮ್ಮೆ ನೆಲಕೊಮ್ಮೆ ಮುಟ್ಟಿಸುತ್ತಾ ಮೂರು ಸಲ ನಿವಾಳಿಸುವಳು. ನಂತರ ಆ ತಂಬಿಗೆಯನ್ನು ಊಟದ ತಟ್ಟೆಯಲ್ಲಿ ಬೋರಲು ಹಾಕುವಳು. ಆಗ ಬೆಂಕಿ ನೀರಿನ ಸಂಪರ್ಕದಲ್ಲಿ ಬಂದು ಸ್ವಯಗೂಡುತ್ತದೆ. ಹಾಗೂ ತಂಬಿಗೆಯಲ್ಲಿಯ ನಿರ್ವಾತತನವು ತಟ್ಟೆಯಲ್ಲಿ ಇದ್ದ ನೀರನ್ನು ಜೋರಿನಿಂದ ಸಪ್ಪಳ ಮಾಡುತ್ತ ಹೀರಿಕೊಳ್ಳುವುದು.

ಆಗ ಕಾಲ್ದೂಳಿ ಆದ್ದು ಖಚಿತವಾಗುವುದು. ಆ ತಾಟನ್ನು ಹೆಚ್ಚು ಅಡುಗಾಡಿಸದೆ ಒಂದು ಬದಿಗೆ ಇಟ್ಟು ಬಿಡುವರು,. ತಂಬಿಗೆ ತನ್ನಿಂದ ತಾನೆ ಸಡಿಲಗೊಂಡು ಒಳಹೊಕ್ಕ ನೀರು ಹೊರಗೆ ಬರಬೇಕು. ಆಗ ಹೊಟ್ಟೆನೋವು ಮಾಯವಾಗಿರುವುದು ಎಂಬ ನಂಬಿಕೆ.

**ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ**

ಕಾಲ್ಧೂಳಿ ಎಂದರೆ ಮನೆಯ ಹೊರಗೆಲ್ಲ ಅಡ್ಡಾಡಿ ಬಂದ ವ್ಯಕ್ತಿಯು ಕಾಲು ತೊಳೆದುಕೊಳ್ಳದೆ ನೇರವಾಗಿ ಊಟದ ಮನೆಯಲ್ಲಿ ಹೊಕ್ಕರೆ ಆಗ ಉಣ್ಣುತ್ತಿದ್ದ ಚಿಕ್ಕಮಕ್ಕಳಿಗೆ ಅವನ ಕಾಲಿನ ಧೂಳು ತಲುಪುವದೆಂದೂ, ಆ ಧೂಳಿನಿಂದ ಕಶ್ಮಲಗೊಂಡ ಆಹಾರ ಹೊಟ್ಟೆಸೇರಿದಾಗ ಹೊಟ್ಟೆ ಮುರಿಯುವದೆಂದೂ ನಂಬಿಕೆ. ಒಂದು ರೀತಿಯಲ್ಲಿ ಕಾಲ್ಧೂಳಿ ಆಚಾರ ಸರಿಎನಿಸಬಹುದು.

ಹೊರಗೆ ಅಡ್ಡಾಡಿ ಬಂದವರು ನೇರವಾಗಿ ಊಟದ ಮನೆಯಲ್ಲಿ ಕಾಲಿಡ ಬಾರದು. ಕಾಲಿಟ್ಟರೆ ಅಲ್ಲಿಪ್ಪ ಆಹಾರ ಪದಾರ್ಥಗಳೂ ಧೂಳಿನಿಂದ ಕಶ್ಮಲ ಗೊಳ್ಳಬಹುದು. ಹಾಗೂ ಕಶ್ಮಲಗೊಂಡ ಆಹಾರವನ್ನು ಸೇವಿಸುವುದರಿಂದ ಸೇವಿಸಿದವರ ಕರುಳಿನಲ್ಲಿ ಊರಿಯುತಣೆ ಕಂಡು ನೋವಾಗುವುದು ಸಾಧ್ಯ. ಆದರೆ ಮೇಲಿ ಹೇಳಿದ ತಂತ್ರವನ್ನು ಮಾಡುವುದರಿಂದ ಯಾರಿಂದ ಲಾಭವೂ ಆಗದು. ಕಾಲ್ಧೂಳಿ ಆಗಬಾರದೆಂಬುದೇನೋ ನಿಜ ಆದರೆ ಆಚರಣೆಯಲ್ಲಿರುವ ತಂತ್ರ ತಪ್ಪು ಎಂಬುವನ್ನು ಜನತೆ ತಿಳಿದುಕೊಳ್ಳಬೇಕು.

# ಆಮಶಂಕೆಗೆ ಸಂಬಂಧಿತ

**ನಂಬಿಕೆ**

ಆಮಶಂಕೆಯಾಗಲು ಕಾಲಲ್ಲಿಯ ಕೆಲವು ನರಗಳ ದುರ್ಬಲತೆ ಕಾರಣ ಎಂಬುದು ಕೆಲವರ ನಂಬಿಕೆ. ಈ ನರಗಳು ಉತ್ತೇಜಿತಗೊಂಡರೆ ಆಮಶಂಕೆ ಶಮನವಾಗುವುದು ಎಂದು ತಿಳುವಳಿಕೆ.

**ಆಚರಣೆ**

ಆಮಶಂಕೆಯಿಂದ ಬಳಲುತ್ತಿರುವ ಮಕ್ಕಳನ್ನು ಅಥವಾ ಸ್ತ್ರೀಯರನ್ನು ಇಲ್ಲವೆ ಮುಗ್ಧರನ್ನು ಕಾಲುತಿಕ್ಕುವವರಲ್ಲಿ ಕರೆದುಕೊಂಡು ಹೋಗುತ್ತಾರೆ. ಕಾಲು ತಿಕ್ಕುವವರು ತಮ್ಮ ಬೆರಳುಗಳ ಎಲವುಗಳಿಂದ ಕಾಲ್ಬೆರಳುಗಳ ಮೆಲ್ಭಾಗ ದಲ್ಲಿ ಜೋರಿನಿಂದ ತಿಕ್ಕುವರು. ಕೆಲವರು ತಿಕ್ಕಲು ಸ್ವಲ್ಪ ಎಣ್ಣೆಯನ್ನು ಬಳಸು ವರು. ಇನ್ನುಳಿದವರು ಬಿಸಿ ಬೂದಿಯನ್ನು ಹಚ್ಚುವರು. ಕೈಬೆರಳುಗಳ ಎಲುವಿ ನಿಂದ ತಿಕ್ಕಲು ಹಿಂಜರಿಯುವರು. ಬೀಸುಕಲ್ಲಿನ ಗೂಟದಿಂದ ಅಥವಾ ಊದು ಕೊಳವೆಯಿಂದ ಜೋರಾಗಿ ಕಾಲಮೇಲೆ ಅದುಮುವರು ಹಾಗೂ ತಿಕ್ಕುವರು. ಈ ಅದುಮುವಿಕೆಯಿಂದ, ತಿಕ್ಕುವುದರಿಂದ ವಿಪರೀತ ನೋವು ಕಾಣುತ್ತದೆ. ಇದಾವುದರ ಪರಿವೆಯು ಉಪಚಾರ ಮಾಡುವವರಿಗೆ ಇರುವುದಿಲ್ಲ; ರೋಗಿ ಅವರ ಉಪಚಾರದಿಂದ ಒದ್ದಾಡಿದ ಮೇಲೆ ಉಪಚಾರ ಮುಗಿಯಿತೆಂದು ಅವನನ್ನು ಮನೆಗೆ ಕಳುಹಿಸುವರು. ಕಾಲುನೋವಾದರೆ ರೋಗ ಗುಣವಾಗು ವುದು ಎಂಬ ನಂಬಿಕೆ.

### ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ

ಪಾದಗಳ ಮೇಲೆ ನಡೆಯುವ ಈ ಅಮಾನುಷ ದಾಳಿಯಿಂದ ಅಲ್ಲಿರುವ ಸ್ನಾಯುಗಳು ಗಾಸಿಗೊಳ್ಳುತ್ತವೆ. ನರಗಳು ಇನ್ನೂ ಆಳದಲ್ಲಿದ್ದು ಎಲುವುಗಳ ನಡುವೆ ಸುರಕ್ಷಿತವಾಗಿರುತ್ತವೆ. ಆದರೆ ತಿಕ್ಕುವಿಕೆಯಿಂದ ಚರ್ಮದ ಬುಡದಲ್ಲಿಯ ಅಂಗಾಂಗಳು ಗಾಸಿಗೊಂಡು ಉರಿಯತಣಿ ಪ್ರಾರಂಭವಾಗುತ್ತದೆ. ಉರಿಯು ತಣಿಯಿಂದ ಪಾದ ಊದಿಕೊಳ್ಳುತ್ತದೆ. ನಡೆಯಲು ಬಹಳ ತೊಂದರೆಯಾಗುತ್ತದೆ. ರೋಗಿ ಒಂದೆರಡು ದಿನ ಕಡ್ಡಾಯವಾಗಿ ಮಲಗಲೇ ಬೇಕಾಗುತ್ತದೆ ಕುಳಿತರೂ ಕಾಲನ್ನು ಊರಿ ಕುಳಿತುಕೊಳ್ಳಲು ಸಾಧ್ಯವಾಗದು. ಇನ್ನು ವೈದ್ಯಕೀಯವಾಗಿ ನೋಡಿದರೆ ಪಾದದಲ್ಲಿಯ ಯಾವುದೇ ಅಂಗಾಗಕ್ಕೂ ಕರುಳಿಗೂ ಸಂಬಂಧವಿಲ್ಲ. ಕಾಲನ್ನು ಕಡಿದು ಚೆಲ್ಲಿದರೂ ಕರುಳಿಗೆ ಎಂತಹ ತೊಂದರೆಯೂ ಆಗುವುದಿಲ್ಲ. ಇನ್ನೂ ಆಮಶಂಕೆ ಎಂದರೆ ಸೂಕ್ಷ್ಮ ಜೀವಿಗಳಿಂದ ಕರುಳಿನ ಲೋಳೆಪರೆಯಲ್ಲಿ ಹುಣ್ಣುಗಳು ಹುಟ್ಟಿಕೊಳ್ಳಬಹುದು. ಈ ಹುಣ್ಣುಗಳು ಮಾಯವಾಗಬೇಕಾದರೆ ಅವುಗಳಿಗೆ ಸೂಕ್ತ ಮದ್ದು ದೊರೆಯಬೇಕು. ಅದನ್ನು ಮಾಡದೆ ಹೋದಾಗ ರೋಗಿಯಲ್ಲಿ ವಿಪರೀತ ತೊಂದರೆಗಳು ಉಂಟಾಗಿ ರೋಗಿ ಮರಣವನ್ನಪ್ಪಬಹುದು. ಕಾರಣವೇ ಆಮಶಂಕೆಯಿಂದ ಬಳಲುವರು, ತಕ್ಷಣವೇ ನುರಿತ ವೈದ್ಯರಿಂದ ಉಪಚಾರ ಪಡೆಯುವುದು ಸೂಕ್ತ. ನರಗಳನ್ನು ತಿಕ್ಕುವುದು ಮೂಢತನ.

## ಕಾಮಾಲೆ ಸಂಬಂಧಿತ

### 1) ರಟ್ಟೆಗೆ ಬಳ್ಳಿ ಕಟ್ಟುವುದು

**ನಂಬಿಕೆ**

ರಟ್ಟೆಗೆ ಬಳ್ಳಿ ಕಟ್ಟಿದರೆ ಕಾಮಾಲೆ ಕಡಿಮೆಯಾಗುತ್ತದೆ. ಈ ಬಳ್ಳಿ ಕಟ್ಟಲು ವಾರದಲ್ಲಿಯ ಒಂದು ದಿನ ನಿರ್ಧರಿಸಲ್ಪಟ್ಟಿರುತ್ತದೆ. ಹಾಗೂ ಬಳ್ಳಿ ಕಟ್ಟುವವರು ತಮ್ಮ ಕೈಗುಣಕ್ಕೆ ಹೆಸರಾಗಿರುತ್ತಾರೆ.

## ಆಚರಣೆ

ಕಾಮಾಲೆಯಾದವರು ಬಳ್ಳಿ ಕಟ್ಟುವವರ ಊರಿಗೆ ಹೋಗಿ ನಿರ್ದಿಷ್ಟ ಪಡಿಸಿದ ಸ್ಥಳದಲ್ಲಿ ಕಾಯುತ್ತ ಕೂಡ್ರುವರು. ಬಳ್ಳಿಯನ್ನು ಕಟ್ಟುವ ವ್ಯಕ್ತಿ ತನ್ನ ಕೆಲಸ ಬಗಸೆಗಳನ್ನು ಮುಗಿಸಿಕೊಂಡು ಆ ಸ್ಥಾನಕ್ಕೆ ಬಂದು ಕೂಡ್ರು ತ್ತಾನೆ. ಒಬ್ಬೊಬ್ಬರಾಗಿ ಅವನ ಹತ್ತಿರ ಹೋಗಿ ಎಷ್ಟು ದಿನಗಳಿಂದ ಕಾಮಾಲೆ ಇದೆ. ಹೇಗೆ ಪ್ರಾರಂಭವಾಯಿತು ಎಂಬುದನ್ನು ವಿವರಿಸುತ್ತಾರೆ. ಆ ವ್ಯಕ್ತಿ ಕಪ್ಪು ಕಾಮಾಲೆ, ಬಿಳಿ ಕಾಮಾಲೆ, ಹಸಿರು ಕಾಮಾಲೆ. ಎಂದು ವಿಂಗಡಿಸಿ ಹೇಳಿ ರೋಗಿಯ ರಟ್ಟೆಗೆ ಒಂದು ಬಳ್ಳಿಯನ್ನು ಸರಿಯಾಗಿ ಸುತ್ತಿ ಕಟ್ಟಿಬಿಡು ತ್ತಾನೆ. ಹಾಗೂ ಕೆಲವು ಪಥ್ಯಗಳನ್ನು ಹೇಳಿ ಕಳಿಹಿಸುತ್ತಾನೆ. ಬಳ್ಳಿ ಕಟ್ಟಿದ ಒಂದು ತಿಂಗಳಲ್ಲಿ ಕಾಮಾಲೆ ಕಡಿಮೆಯಾಗುವುದು ಎಂದು ಹೇಳುತ್ತಾರೆ.

## ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ

ಕಾಮಾಲೆಗಳಲ್ಲಿ ಹಲವಾರು ಪ್ರಕಾರಗಳಿವೆ ಹೆಚ್ಚು ಜನರಿಗೆ ತಗ ಲುವ ಕಾಮಾಲೆಯೆಂದರೆ ಸೋಂಕು ಕಾಮಾಲೆ. ಇದು ಒಂದು ವೈರಸ್ ಜೀವಾಣುವಿನ ಸೋಂಕಿನಿಂದ ಬರುತ್ತದೆ. ವೈರಸ್ ಜೀವಿಯು ಮಲ ಆಹಾರ ಕಶ್ಮಲತೆಯಿಂದ ದೇಹದಲ್ಲಿ ಸೇರಿ ಯಕೃತದ ಜೀವಕಣಗಳಲ್ಲಿ ಹೊಕ್ಕು ಲಕ್ಷಗಟ್ಟಲೇ ಯಕೃತ ಜೀವಕಣಗಳನ್ನು ನಾಶಪಡಿಸುತ್ತವೆ. ಇದೇ ಕಾರಣ ದಿಂದ ಯಕೃತದ ಕಾರ್ಯದಲ್ಲಿ ತಡೆಯುಂಟಾಗಿ ಪಿತ್ತವರ್ಣ ಹಾಗೂ ಪಿತ್ತ ಲವಣಗಳು ರಕ್ತದಲ್ಲಿ ಸೇರಿಕೊಂಡು ದೇಹದ ಎಲ್ಲ ಅಂಗಾಂಗಗಳಿಗೂ ತಲುಪಿ ಅವುಗಳಲ್ಲಿ ಶೇಖರಗೊಳ್ಳತ್ತವೆ. ಹೀಗೆ ಪಿತ್ತ ವರ್ಣ ಮೈತುಂಬ ಹರಡಿ ಕೊಂಡಾಗ ರೋಗಿಯ ಲೋಳೆಪರೆ ಚರ್ಮ ಕಣ್ಣು ಹಳದಿ ವರ್ಣದ್ದಾಗಿ ಕಾಣುವುದು. ಅದನ್ನೇ ನಾವು ಕಾಮಾಲೆ ಎನ್ನುವೆವು.

ಯಕೃತುವಿನಲ್ಲಿ ಸೇರಿಕೊಂಡ ವೈರಸ್ ಜೀವಿಯನ್ನು ಹಾಗೂ ಅದರ ಉಪಟಳವನ್ನು ದೇಹವು ಕೆಲವು ದಿನಗಳವರೆಗೆ ಸಹಿಸಿಕೊಳ್ಳುತ್ತದೆ. ಮುಂದೆ ನಿರೋಧಕ ಶಕ್ತಿ ಹೆಚ್ಚಿ ವೈರಸ್ ಜೀವಿಯನ್ನು ನಿಷ್ಕ್ರಿಯಗೊಳಿಸುತ್ತದೆ.

ಹಾಗೆ ನಾಶಗೊಳ್ಳಲ್ಪಟ್ಟ ಯಕೃತ ಜೀವಕಣಗಳ ಸ್ಥಾನದಲ್ಲಿ ಹೊಸ ಯಕೃತ ಜೀವಕಣಗಳು ಬೆಳೆಯುತ್ತವೆ ಯಕೃತದ ಕಾರ್ಯ ಮತ್ತೆ ಸಾಂಗವಾಗಿ ನಡೆಯುತ್ತದೆ. ಕಾಮಾಲೆ ತನ್ನಿಂದ ತಾನೇ ಮಾಯವಾಗುತ್ತದೆ.

ಕಾಮಾಲೆ ಕಂಡಾಗನಿಂದ ರೋಗದ ಉಲ್ಬಣತೆ ಕೇವಲ 15 ದಿನದಿಂದ 20 ದಿನಗಳವರೆಗೆ ಇರುವುದು. ಅಂದರೆ ಒಂದು ತಿಂಗಳಲ್ಲಿ ರೋಗವು ತನ್ನಿಂದ ತಾನೆ ಗುಣವಾಗುವುದು. ಈ ಸೋಂಕು ಕಾಮಾಲೆಗೆ ಯಾವುದೇ ಮದ್ದು ಕೊಟ್ಟರೂ ಸರಿ ಕೊಡದಿದ್ದರೂ ಸರಿ. ಅದು ಪ್ರತಿಶತ 95 ಜನರಲ್ಲಿ ಶಮನಗೊಳ್ಳುವುದು. ಬಳ್ಳಿಕಟ್ಟುವವರಿಗೆ ಈ ಸಂಗತಿ ಗೊತ್ತಿರುತ್ತದೆ. ಕಾರಣ ಅವರು ಬಳ್ಳಿಯನ್ನು ರಟ್ಟೆಗೆ ಕಟ್ಟಿ ಒಂದು ತಿಂಗಳು ಅವಧಿಯನ್ನು ಕೊಡುವರು. ರೋಗವು ತನ್ನಿಂದ ತಾನೇ ಗುಣ ಹೊಂದಿದರೂ ಬಳ್ಳಿಯ ಪ್ರಭಾವವೆಂದೂ ಕಟ್ಟುವವನ ಕೈಗುಣವೆಂದೂ ವರ್ಣಿಸಲಾಗುವುದು.

ಇನ್ನು ಬಳ್ಳಿಯನ್ನು ರಟ್ಟೆಗೆ ಕಟ್ಟುವುದರಿಂದ ಆಗುವ ಹಾನಿ ಏನು ಎಂಬುದನ್ನು ನೋಡೋಣ, ಬಳ್ಳಿಯು ಹಸಿ ಇದ್ದಾಗ ಸ್ವಲ್ಪ ಮಟ್ಟಿಗೆ ಹಿಗ್ಗುತ್ತದೆ. ಅದನ್ನು ಜಗ್ಗಿ ಕಟ್ಟುವುದರಿಂದ ಕಟ್ಟಿಸಿಕೊಂಡಾಗ ರೋಗಿಗೆ ಏನೂ ಅನಿಸುವುದಿಲ್ಲ. ಬಳ್ಳಿ ಒಣಗಿದಂತೆ ಸಂಕುಚಿತಗೊಳ್ಳುತ್ತದೆ. ಕ್ರಮೇಣ ಚರ್ಮದಲ್ಲಿ ಕೊರೆದು ಗಾಯವನ್ನು ಮಾಡುತ್ತದೆ. ಗಾಯಕ್ಕೆ ರೋಗಾಣುಗಳು ಸೇರಿಕೊಂಡು ಇನ್ನೂ ಹೆಚ್ಚಿನ ತೊಂದರೆಯನ್ನು ತರಲು ಸಾಧ್ಯ.

ಎರಡನೆಯ ತೊಂದರೆಯೆಂದರೆ ಅಕಸ್ಮಾತ್ತಾಗಿ ರೋಗಿಯಲ್ಲಿ ತೋರಿದ ಕಾಮಾಲೆ ಸೋಂಕು ಕಾಮಾಲೆಯಾಗಿರದೆ ಬೇರೆ ಪ್ರಕಾರದ ಕಾಮಾಲೆಯಾಗಿದ್ದರೆ ಅದನ್ನು ಹುಟ್ಟಿಸುವ ರೋಗವು ಯಾವ ಉಪಚಾರವಿಲ್ಲದೆ ಬೆಳೆಯುತ್ತಾ ಹೋಗಿ ರೋಗಿಯ ಜೀವನಕ್ಕೆ ಅಪಾಯವನ್ನುಂಟುಮಾಡಲು ಸಾಧ್ಯವಿದೆ. ಇಂಥ ಕಾಮಾಲೆಗಳನ್ನು ಆದಷ್ಟು ಶೀಘ್ರ ಸಂಶೋಧಿಸಿ ಅವುಗಳ ಕಾರಣಗಳನ್ನು ಗುರುತಿಸಬೇಕು ಹಾಗೂ ಸೂಕ್ತ ಉಪಾಯಗಳನ್ನು ಮಾಡಬೇಕಾಗುವುದು. ಈ ಸಂಗತಿಯನ್ನು ನಾವು ನಮ್ಮ ಮುಗ್ಧ ಜನರಿಗೆ ತಿಳಿಸಿ

ಕೊಡಬೇಕು. ಬಳ್ಳಿ ಕಟ್ಟುವಂತೆ ಇನ್ನೂ ಕೆಲವರು ಉಪಾಯವನ್ನು ಮಾಡು ತ್ತಾರೆ. ಅವೆಂದರೆ ತಾಂಬೂಲ ತಿನ್ನುವುದು. ಕೆಲವು ವಿಶಿಷ್ಟ ವ್ಯಕ್ತಿಗಳು ಯಾರಿಗೂ ಗೊತ್ತಾಗದಂತೆ ಒಂದು ತಾಂಬೂಲವನ್ನು ಮಾಡಿ ರೋಗಿಯ ಬಾಯಲ್ಲಿಡುವರು. ರೋಗಿ ಅವನ್ನು ತಿಂದು ನುಂಗಬೇಕು. ಪ್ರತಿವಾರ ಒಂದ ರಂತೆ ನಾಲ್ಕು ವಾರ ತಾಂಬೂಲವನ್ನು ಕೊಡುತ್ತಾರೆ. ಅಂದರೆ ರೋಗ ಗುಣ ವಾಗುವುದು ಎಂದು ಅವರ ಹೇಳಿಕೆ. ಇಲ್ಲಿಯೂ ನಾವು ಮೇಲೆ ಹೇಳಿದ ಸಂಗತಿಯೇ ಅನ್ವಯಿಸುತ್ತದೆ. ಕೆಲವು ಊರುಗಳಲ್ಲಿ ಕೆಲವು ಜನರು ಕುಡಿ ಯಲು ಯಾವುದೋ ನೀರನ್ನು ಕೊಡುತ್ತಾರೆ. ಈ ನೀರನ್ನಾದರೂ ಪ್ರತಿ ವಾರಕ್ಕೆ ಒಮ್ಮೆಯಂತೆ ನಾಲ್ಕು ವಾರಗಳವರೆಗೆ ಕುಡಿದು ಬರಬೇಕು. ಈ ಎಲ್ಲ ತಂತ್ರಗಳಲ್ಲಿಯೂ ಒಂದು ಸಂಗತಿ ಸ್ಪಷ್ಟವಾಗುತ್ತದೆ. ಅದೆಂದರೆ ಬಹುತೇಕ ಕಾಮಾಲೆ ನಾಲ್ಕು ವಾರದೊಳಗೆ ಕಡಿಮೆಯಾಗುತ್ತದೆ ಎಂಬುದು.

# ಹಾಲಿಗೆ ಸಂಬಧಿತ

**ನಂಬಿಕೆ**

ನೊರೆನೊರೆಯಾದ ಹಾಲಿನಲ್ಲಿ ಶಕ್ತಿ ಇದ್ದಷ್ಟು ಕುದಿಸಿದ ಹಾಲಿನಲ್ಲಿ ಶಕ್ತಿ ಇರುವುದಿಲ್ಲ.

**ಆಚರಣೆ**

ಮೇಲಿನ ನಂಬಿಕೆಯನ್ನು ತಾಯಂದಿರು ಊರಲ್ಲಿರುವ ಗರಡಿಮನೆಯವರ ಮಕ್ಕಳಿಗೆ ಬೋಧಿಸುತ್ತಾರೆ, 'ಕೃಷ್ಣನ' ಉದಾರಣೆಯನ್ನು ಕೊಡುತ್ತಾರೆ. ಹಾಗೂ ಮಕ್ಕಳಿಗೆ ಹಾಲು ಹಿಂಡುವ ಪ್ರಾಣಿಯ ಬಳಿಯಲ್ಲಿಯೇ ಕುಳಿತು ಕೊಂಡು ಹಾಲು ಹಿಂಡಿದೊಡನೆ ಹಾಲಿಗೆ ಇನ್ನೂ ಮೈ ಬಿಸಿಯು ಇರುವಷ್ಟ ರಲ್ಲಿಯೇ ಕುಡಿಯಲು ಹೇಳುತ್ತಾರೆ. ಮಕ್ಕಳು ಈ ಹಾಲನ್ನು ಖುಷಿಯಿಂದಲೇ ಕುಡಿಯುತ್ತಾರೆ. ಕುಡಿಯದಿದ್ದ ಹುಡುಗರಿಗೆ ಚೇಷ್ಟೆ ಮಾಡಿ ಅವರಿಗೂ ಕುಡಿಯಲು ಪ್ರೇರೇಪಿಸುತ್ತಾರೆ.

## ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ

ಹಾಲು ಕೊಡುವ ಎಮ್ಮೆಯಾಗಲಿ, ಆಕಳು ಆಗಲಿ, ಆಡಾಗಲಿ ಆರೋಗ್ಯ ಪೂರ್ಣವಾಗಿದ್ದರೆ ಹಸಿ ಹಾಲನ್ನು ಕುಡಿಯುವುದರಲ್ಲಿ ಯಾವ ತೊಂದರೆಯೂ ಇಲ್ಲ. ಆದರೆ ಈ ಪ್ರಾಣಿಗಳು ಆರೋಗ್ಯವಂತ ಪ್ರಾಣಿಗಳೆಂದು ಹೇಳಲು ಸಾಧ್ಯವಿಲ್ಲ.

ಹೈನು ಪ್ರಾಣಿಗಳು ಕ್ಷಯರೋಗದಿಂದ ಅಥವಾ ಬ್ರೂಸೆಲ್ಲ (Brucellosis) ರೋಗದಿಂದ ಬಳಲುತ್ತಿರಬಹುದು ಎಂಬ ಸಂಗತಿ ಅನೇಕರಿಗೆ ಗೊತ್ತಿಲ್ಲ ಕ್ಷಯರೋಗವಾಗಲಿ ಬ್ರೂಸೆಲ್ಲ ರೋಗವಾಗಲಿ ಪ್ರಾಣಿಗಳ ವಿವಿಧ ಅಂಗಾಂಗಳಲ್ಲಿ ಸೇರಿಕೊಂಡಿರುವುದಲ್ಲದೆ ಕೆಚ್ಚಲಿಗೂ ತಮ್ಮ ದಾಳಿಯನ್ನು ನಡೆಸಿರುತ್ತವೆ. ಕೆಚ್ಚಲಿನಲ್ಲಿ ಕ್ಷಯರೋಗದ ಅಥವಾ ಬ್ರೂಸೆಲ್ಲ ರೋಗದ ಗಂಟು ಇದ್ದಾಗ ಮೊಲೆಯನ್ನು ಹಿಂಡುವಾಗ ಆ ಗಂಟನ್ನೂ ಹಿಂಡುತ್ತಾರೆ ಇದರಿಂದ ಹಾಲಿ ನೊಡನೆ ಗಂಟುಗಳಲ್ಲಿಯ ಕೀವೂ ಸಹ ಬೆರೆತುಕೊಳ್ಳುತ್ತದೆ. ಈ ಕೀವಿನಲ್ಲಿ ಅಸಂಖ್ಯ ರೋಗಾಣುಗಳು ಇರುತ್ತವೆ. ಅಂದರೆ ಮಕ್ಕಳಿಗೆ ರೋಗಗ್ರಸ್ತ ಪ್ರಾಣಿಯ ಹಾಲನ್ನು ಕುಡಿಸುವಾಗ ನಾವು ಅವುಗಳಿಗೆ ಕೀವೂ ಹಾಗೂ ರೋಗಾಣುಗಳನ್ನು ಕುಡಿಸುತ್ತೇವೆ ಎಂಬುದು ತಿಳಿಯುವುದು.

ಒಂದು ವೇಳೆ ಈ ಹಾಲನ್ನು ಪಾಶ್ಚರಿಕರಿಸಿ ಅಥವಾ ಕುದಿಸಿ ಮಕ್ಕಳಿಗೆ ಕೊಟ್ಟದ್ದೇ ಆದರೆ ಹಾಲಿನಲ್ಲಿ ಇರಬಹುದಾದ ರೋಗಾಣುಗಳು ನಾಶಗೊಳಿಸ್ವಲ್ಪಟ್ಟಿರುತ್ತವೆ, ಹಾಗೂ ಹಾಲು ರೋಗ ಪ್ರಸಾರ ಮಾಡಲಾರದು. ಇನ್ನು ಹಾಲನ್ನು ಕುದಿಸುವುದರಿಂದ ಅದರಲ್ಲಿಯ ಶಕ್ತಿ ಕಡಿಮೆಯಾಗುತ್ತದೆ ಎಂಬ ಮಾತು ಸಂಪೂರ್ಣವಾಗಿ ತಪ್ಪು ಎಂಬುದನ್ನು ವೈಜ್ಞಾನಿಕವಾಗಿ ತೋರಿಸಿ ಕೊಡಲಾಗಿದೆ. ಯಾವ ರೀತಿಯಿಂದಲೂ ಹಾಲಿನ ಪೌಷ್ಟಿಕತೆಯಲ್ಲಿ ಕುಂದು ಬಾರದು. ಕಾರಣ ಮಕ್ಕಳಿಗೆ ಹಸಿ ಹಾಲನ್ನು ಕುಡಿಸದೆ ಕುದಿಸಿದ ಹಾಲನ್ನು ಕುಡಿಸಬೇಕು. ಇನ್ನೊಂದು ರೀತಿಯಿಂದ ಹಾಲು ರೋಗಾಣುಗಳಿಂದ ಕಶ್ಮಲ ಗೊಳ್ಳಲು ಸಾಧ್ಯವಿದೆ. ಅದೆಂದರೆ ಹಿಂಡುವ ಗೌಳಿಗಳು ಕ್ಷಯ ರೋಗದಿಂದ ಬಳಲುತ್ತಿದ್ದರೆ, ಹಾಲನ್ನು ಹಿಂಡುವಾಗ ಕೆಮ್ಮಿದರೆ, ಜೋರಿನಿಂದ ಮಾತ

ನಾಡಿದರೆ ಅವರ ಉಚ್ಛ್ವಾಸದಲ್ಲಿ ಅಸಂಖ್ಯ ಕ್ಷಯರೋಗ ಬ್ಯಾಕ್ಟೀರಿಯಾಗಳು ಹೊರಬಂದು ಹಿಂಡುವ ಹಾಲಿನೊಳಗೆ ಸೇರಿಕೊಳ್ಳುತ್ತವೆ ಹಾಗೂ ಹಾಲನ್ನು ಕಶ್ಮಲಗೊಳಿಸುತ್ತವೆ. ಇದಲ್ಲದೆ ಹಾಲನ್ನು ಹಿಡಿಯುತ್ತಿರುವ ತಂಬಿಗೆಯಾಗಲಿ ಬೇರೆಯಾದ ಪಾತ್ರೆಯಾಗಲಿ ರೋಗಾಣುಗಳಿಂದ ಕಶ್ಮಲಗೊಳ್ಳಲು ಸಾಧ್ಯವಿದೆ ಹಾಗೂ ರೋಗ ಪ್ರಸಾರ ಸಂಭವವಿದೆ. ಕಾರಣವೇ ಕುದಿಸಿದ ಹಾಲನ್ನು ಕುಡಿಯುವುದು ಲೇಸು.

# ಗಂಟಲುನೋವು ಹಾಗೂ ಕೆಮ್ಮಿಗೆ ಸಂಬಂಧಿತ

## 1) ಕಿರುನಾಲಿಗೆ ಉದ್ದಾಗುವದು

### ನಂಬಿಕೆ

ಒಬ್ಬ ವ್ಯಕ್ತಿ ಬಹಳ ದಿನಗಳವರೆಗೆ ಕೆಮ್ಮುತ್ತ ನಡೆದರೆ ಯಾರೋ ಒಬ್ಬರು ಅವನ ಗಂಟಲನ್ನು ನೋಡುವರು ಹಾಗೂ ಕಿರುನಾಲಿಗೆ ಉದ್ದವಾಗಿದೆ ಅದಕ್ಕೆ ನೀನು ಕೆಮ್ಮುತ್ತಿರುವಿ. ಅದನ್ನು ಸುಟ್ಟರೆ ನಿನ್ನ ಕೆಮ್ಮು ಕಡಿಮೆ ಯಾಗುವುದು ಎಂದು ಹೇಳುವರು.

### ಆಚರಣೆ

ಕಿರುನಾಲಿಗೆ ಎಂದರೆ ಎಲುವು ರಹಿತ ಅಂಗ. ಇದು ಒಂದು ವಪೆಯಂತೆ ಕೆಲಸ ಮಾಡುತ್ತದೆ, ಮಧ್ಯಭಾಗದಲ್ಲಿ ಗಂಟೆಯಂತೆ ಚಾಚಿಕೊಂಡಿರುತ್ತದೆ. ಇದನ್ನೆ ಜನರು ಕಿರುನಾಲಿಗೆ ಎನ್ನುತ್ತಾರೆ ಇದನ್ನು ಸುಡಲು ಹಲವಾರು ಉಪಾಯಗಳನ್ನು ಮಾಡುತ್ತಾರೆ. ಕೆಲವರು ಒಂದು ಚಮಚೆಯಲ್ಲಿ ಎಣ್ಣೆ ಬೆಳ್ಳೊಳ್ಳಿಗಳನ್ನು ಹಾಕಿ ಚೆನ್ನಾಗಿ ಕಾಯಿಸುತ್ತಾರೆ. ಈ ಚಮಚೆಯನ್ನು ಕೆಮ್ಮುವ ವ್ಯಕ್ತಿಯ ಬಾಯಿಯಲ್ಲಿ ಹಾಕಿ ಕಿರುನಾಲಿಗೆಯನ್ನು ಸುಡುತ್ತಾರೆ. ಇನ್ನೂ ಕೆಲವರು (ಹೆಚ್ಚಾಗಿ ಮುಲ್ಲಾಗಳು) ತಮ್ಮಲ್ಲಿಯ ದಪ್ಪವಾಗಿರುವ ಊದುಬತ್ತಿಗಳಿಂದ ಕಿರುನಾಲಿಕೆಯನ್ನು ಸುಡುತ್ತಾರೆ ಮತ್ತು ಕೆಲವರು ಕಬ್ಬಿಣದ ತಂತಿಯಿಂದ ಇಲ್ಲವೆ ಡಬ್ಬಣದಿಂದ ಸುಡುತ್ತಾರೆ.

**ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ :-**

ಕೆಮ್ಮು ಬರಲು ಹಲವಾರು ಕಾರಣಗಳಿವೆ. ಅಂದರೆ ಗಂಟಲಲ್ಲಿ ಇಲ್ಲವೆ ಶ್ವಾಸನಾಳದಲ್ಲಿ ಅಥವಾ ಪುಪ್ಪುಸದಲ್ಲಿ ಉರಿಯುತಣಿ ಕಂಡಾಗ ಕೆಮ್ಮು ಬರುತ್ತದೆ. ಕೆಮ್ಮಿನಿಂದ ವ್ಯಕ್ತಿ ನಾಲ್ಕೈದು ದಿನಗಳವರೆಗೆ ಬಳಲಿದಾಗ ಅವನ ಕಿರುನಾಲಗೆಯೂ ಸಹ ಉರಿಯುತಣಿಯಿಂದ ಬಳಲಬಹುದು. ಇಲ್ಲವೆ ಊದಿ ಕೊಂಡಿರಬಹುದು. ಅದು ದೊಡ್ಡದಾಗಿರಲಿಕ್ಕೆ ಕಾರಣವು ಕೆಮ್ಮು.

ಆದರೆ ನಮಗೆ ದೊರೆಯುವ ವಿವರಣೆಯಿಂದರೆ ಕಿರುನಾಲಿಗೆ ಉದ್ದ ವಾಗಿರುವದರಿಂದ ಕೆಮ್ಮು ಬರುತ್ತದೆ ಎಂದೂ, ಇನ್ನೂ ಉದ್ದವಾದ ಕಿರು ನಾಲಗೆಯನ್ನು ಸುಡುವುದರಿಂದ ವ್ಯಕ್ತಿಗೆ ಹಾನಿಯೇ ವಿನಾಃ ಲಾಭವೇನಿಲ್ಲ. ಯಾವುದೇ ಬಗೆಯಿಂದ ಕಿರುನಾಲಿಗೆಯನ್ನು ಸುಟ್ಟರೂ ಅದು ವ್ಯಕ್ತಿಗೆ ತೊಂದರೆಯನ್ನು ಉಂಟುಮಾಡುವುದು. ಹಲವಾರು ಸಲ ಕುಡಿಯುವ ಎಣ್ಣೆ ಯಿಂದ ಮುಗ್ಧ ಜನರು ತಮ್ಮ ಗಂಟಲನ್ನೆಲ್ಲ ಸುಟ್ಟಕೊಂಡಿರುವರು. ಇನ್ನೂ ಕೆಲವು ಸಲ ಕಿರುನಾಲಿಗೆಯ ಬದಲಾಗಿ ಸುಡುವ ಸಲಾಕೆ ಬೇರೆ ಭಾಗದ ಗಂಟಲನ್ನು ಸುಟ್ಟು ಗಾಯಗೊಳಿಸಲೂಬಹುದು. ಮೊದಲೆ ಉರಿಯುತಣೆ ಯಿಂದ ಬಳಲುತ್ತಿರುವ ಗಂಟಲು ಮತ್ತೊಂದು ಉರಿಯುತಣೆಯನ್ನು ಎದುರಿಸ ಬೇಕಾಗುತ್ತದೆ. ಇದನ್ನೂ ತಪ್ಪಿಸುವುದು ಸೂಕ್ತ.

## 2 ಗಂಟಲು ಬೇನೆಗೆ ಕುತ್ತಿಗೆ ತಿಕ್ಕುವುದು

**ನಂಬಿಕೆ**

ಕುತ್ತಿಗೆ ತಿಕ್ಕುವುದರಿಂದ ಮೆಂಡಿಕೆಯ ಬಾವು ಕಡಿಮೆಯಾಗುತ್ತದೆ.

**ಆಚರಣೆ**

ಮೆಂಡಿಕೆ ಅಂದರೆ ಗಂಟಲಲ್ಲಿರುವ "ಟಾನ್ಸಿಲ್" (Tonsil) ಎಂದು ಅರ್ಥ. ಚಿಕ್ಕ ಮಕ್ಕಳಲ್ಲಿ ಹಲವಾರು ರೋಗಾಣುಗಳ ಸೋಂಕಿನಿಂದ ಮೆಂಡಿಕೆ

ಗಳು ಊದಿಕೊಳ್ಳಬಹುದು. ಹೀಗೆ ಊದಿಕೊಂಡ ಮೆಂಡಿಕೆಗಳನ್ನು ಗುಣವಾಗುವಂತೆ ಮಾಡಲು ಕೆಲವು ಜನರು ಬಿಸಿ ಬೂದಿಯಿಂದ ಕುತ್ತಿಗೆಯ ಎರಡೂ ಬದಿಗೆ ತಿಕ್ಕುತ್ತಾರೆ. ಇವರ ಎಣಿಕೆಯಂತೆ ಮೆಂಡಿಕೆ ಗುಣವಾಗುವುದು.

### ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ

ವೈದ್ಯಕೀಯ ಭಾಷೆಯಲ್ಲಿ ಮೆಂಡಿಕೆಯಾಗಲಿ ಅಥವಾ ಟಾನ್ಸಿಲ್ ಆಗಲಿ ಒಂದು ಹಾಲ್ರಸಗ್ರಂಥಿ. ಅಲ್ಲಿ ಹಾಲ್ರಸ ಜೀವಿಕಣಗಳು ದೊಡ್ಡ ಸಂಖ್ಯೆಯಲ್ಲಿ ಇರುವವು. ಸೋಂಕು ತಗುಲಿದರೆ ಈ ಅಂಗಾಂಶ ಊದಿಕೊಳ್ಳುತ್ತದೆ. ಇದನ್ನೇ ನಾವು ಟಾನ್ಸಿಲೈಟಿಸ್ (Tonsilitis) ಅನ್ನುತ್ತೇವೆ. ಇದಕ್ಕೆ ಮೆಂಡಿಕೆ ಆಗಿವೆ ಎಂದು ಹೇಳುವರು. ಈ ಉರಿಯೂತಣೆ ಕಡಿಮೆಯಾಗಬೇಕಾದರೆ ಅಲ್ಲಿ ಶೇಖರಗೊಂಡಿರುವ ಹಾಗೂ ಬೆಳೆಯುತ್ತಿರುವ ರೋಗಾಣುಗಳು ನಾಶವಾಗಬೇಕು. ಅವು ಬೇಗನೆ ನಾಶವಾಗಬೇಕಾದರೆ ಸೂಕ್ತವಾದ ಆಂಟಿಬೈಯೊಟಿಕ್ (Antibiotic) ಗಳನ್ನು ಕೊಡಬೇಕಾಗುವುದು. ಅದನ್ನು ಮಾಡದೆ ಕೇವಲ ಕುತ್ತಿಗೆಯ ಬದಿಯಲ್ಲಿ ಬಿಸಿಬೂದಿ ಹಚ್ಚಿ ತಿಕ್ಕಿದರೆ ಇಲ್ಲವೇ ಬೂದಿ ಹಚ್ಚಿ ಕಾಸಿದ ಕಟ್ಟಿಗೆಯ ಹುಟ್ಟಿನಿಂದ ಕಾಯಿಸಿದರೆ ರೋಗಾಣುಗಳು ನಾಶವಾಗಲಾರವು. ಆದರಿಂದ ಉರಿಯುತಣೆ ಕಡಿಮೆಯಾಗಲಾರದು. ಮೆಂಡಿಕೆ ಗುಣಹೊಂದುವುದಿಲ್ಲ. ಇಲ್ಲಿ ಸಾಧ್ಯವಾದಷ್ಟು ಜಾಗ್ರತೆಯಾಗಿ ಸೂಕ್ತ ಔಷದೋಪಚಾರ ಮಾಡಿಸಬೇಕು. ಇದನ್ನು ತಪ್ಪಿಸುತ್ತ ನಡೆದರೆ ಮಗುವು ಬೇರೆ ಪ್ರಕಾರದ ತೀವ್ರತರಹದ ತೊಂದರೆಗಳಿಗೆ ಗುರಿಯಾಗಬಹುದು. ಒಂದನ್ನು ಹೆಸರಿಸುವದಾದರೆ "ರೋವ್ಯಾಟಿಕ್" ಹೃದಯರೋಗದಂತಹ ತೊಂದರೆಗಳು ಬರುವವು.

## ಹುಳುಕು ಹಲ್ಲಿಗೆ ಸಂಬಂಧಿತ ಮೂಢ ವಿಚಾರಗಳು

### ನಂಬಿಕೆ

ಹಲ್ಲು ಹುಳುಕಾಗಲು ಕಾರಣವೆಂದರೆ ಒಂದು ಪ್ರಕಾರದ ಜಂತು ಅಥವಾ ಹುಳ. ಈ ಹುಳವನ್ನು ಹಲ್ಲಿನಿಂದ ಹೊರಗೆ ತೆಗೆದರೆ ಹುಳುಕು

ಹಲ್ಲು ಸರಿಯಾಗುವುದು ಎಂಬುದು ಒಂದು ತಿಳುವಳಿಕೆ. ಈ ಹುಳವನ್ನು ಹಲ್ಲಿನಿಂದ ಹೊರಗೆ ತೆಗೆಯಬೇಕಾದರೆ ಇವರು ಸೂಚಿಸುವ ಉಪಾಯ ಸ್ವಾರಸ್ಯ ಕರವೂ ಹೌದು, ಅಷ್ಟೇ ಹಾನಿಕರವೂ ನಿಜ. ಅವರ ಉಪಾಯವೆಂದರೆ ಯಾವ ದವಡೆಯ ಹಲ್ಲು ಹುಳುಕಾಗಿರುವುದೋ ಆ ಬದಿಯ ಕಿವಿಯಲ್ಲಿ ಕೊಳವೆ ಹಾಕಿ ಜೋರಿನಿಂದ ಊದಬೇಕು, ಹಾಗೆ ಜೋರಿನಿಂದ ಬರುವ ಗಾಳಿಗೆ ಗಲಿ ಬಿಲಿಗೊಂಡ ಹುಳುವು ಹಲ್ಲಿನಿಂದ ಹೊರಗೆ ಬರುತ್ತದೆ ಅದು ಬಂದ ತಕ್ಷಣ ಹಿಡಿದು ಹೊರಗೆಳೆದು ಹಾಕಬೇಕು. ನಂತರ ಹುಳುಕು ಹಲ್ಲು ಗುಣವಾಗು ತ್ತದೆ.

## ಆಚರಣೆ

ಕಿವಿ ಊದಿ ಹುಳುಕು ಹಲ್ಲು ಗುಣಪಡಿಸುವವರು ಒಂದು ವೃತ್ತಿ ಯನ್ನೇ ಮಾಡಿಕೊಂಡಿರುತ್ತಾರೆ. ಇವರಲ್ಲಿ ವಿವಿಧ ಆಕಾರದ ಲೋಹದ ಕೊಳವೆಗಳಿರುತ್ತವೆ. ಈ ಕೊಳವೆಗಳನ್ನು ಅವರು ಕಿವಿಯಲ್ಲಿ ಹಾಕಿ ಜೋರಿ ನಿಂದ ಊದುವರು. ಊದಿದ ನಂತರ ವ್ಯಕ್ತಿಯ ಬಾಯಿಯನ್ನು ತೆಗೆಸಿ ಹುಳ ಹೊರಗೆ ಬಂದಿರುವುದೋ ಇಲ್ಲವೋ ನೋಡಿ ಹೇಳುವರು. ಇದನ್ನು ಮಾಡಲು ಹಣ ಇಸಿದುಕೊಂಡು ಕಳುಹಿಸುವರು.

## ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ

ಕಿವಿಗೂ ಹಲ್ಲಿಗೂ ಎಂತಹದೇ ಸಂಬಂಧವಿಲ್ಲ ಮೇಲಿನ ನಂಬಿಕೆ ತಪ್ಪು ಹೌದು, ಹಾಗೂ ಭಯಾನಕವೂ ಹೌದು. ಹಲ್ಲು ಹುಳುಕು ಹತ್ತಲು ಕಾರಣವೆಂದರೆ ಹಲ್ಲಿನ ಮೇಲಿರುವ ಬಿಳಿಯ ನುಣುಪಾದ ವಸ್ತುವು ಕರಗ ಬೇಕು ಇದು ಕರಗಬೇಕಾದರೆ ಅದರ ಮೇಲೆ ಆಮ್ಲದ ಕ್ರಿಯೆಯು ನಡೆಯ ಬೇಕು. ಬಾಯಲ್ಲಿರುವ ಬ್ಯಾಕ್ಟೀರಿಯಾ ಜೀವಿಗಳು ಆಮ್ಲವನ್ನು ತಯಾರಿಸು ತ್ತವೆ. ಹೊರಪದರ ಕರಗಿದ ಮೇಲೆ ಬ್ಯಾಕ್ಟೀರಿಯಾಗಳು ಹಲ್ಲಿನೊಳಗೆ ಸೇರಿ ಅಲ್ಲಿಯೂ ತಮ್ಮ ನಾಶನ ಕ್ರಿಯೆಯನ್ನು ಪ್ರಾರಂಭಿಸಿ ಸಂಪೂರ್ಣ ಹಲ್ಲು ಹಾಳಾಗುವಂತೆ ಮಾಡುತ್ತವೆ.

ಮೇಲಿನ ನಂಬಿಕೆಯಲ್ಲಿ ಹೇಳಿದಂತೆ ಮಾಡುತ್ತಾನೆ. ಹುಳುವು ಬಾಯಿ ಯಲ್ಲಿ ಸೇರಿ ಹಲ್ಲಿನಲ್ಲಿ ರಂಧ್ರಕೊರೆದು ಹಾವಿನಂತೆ ಒಳಸೇರಿಕೊಂಡು ಕುಳಿತು ಕೊಳ್ಳುವುದು ಎಂಬ ಕಲ್ಪನೆ ತಪ್ಪು, ಇದನ್ನು ನಾವು ಮುಗ್ಧಜನರಿಗೆ ತಿಳಿಸಬೇಕು. ಇನ್ನು ಕಿವಿ ಊದುವದರಿಂದ ಕಿವಿಯು ಧ್ವನಿಪರದೆ ಹರಿದು ಹೋಗುವ ಸಂಭವ ಉಂಟು. ಹುಳುಕು ಹಲ್ಲಿನೊಡನೆ ಕಿವುಡತನವು ಬಳು ವಳಿಯಾಗಿ ಬರುವುದು. ಇನ್ನೂ ಧ್ವನಿಪರದೆ ಹರಿದದ್ದೇ ಆದರೆ ಮಧ್ಯ ಕಿವಿಯಲ್ಲಿ ಕೀವುಕಾರಕ ಬ್ಯಾಕ್ಟೀರಿಯಾಗಳು ಸೇರಿಕೊಂಡು ಕೀವನ್ನು ಹುಟ್ಟಿಸು ವವು. ಈ ಕೀವು ನೇರವಾಗಿ ಮೆದುಳನ್ನು ತಲುಪಬಹುದು. ಕಾರಣ ಈ ಉಪ ಚಾರ ಬಹಳ ಹಾನಿಕಾರಕ.

# ಗಂಡಮಾಲೆ ಗಂಟುಗಳಿಗೆ ಸಂಬಂಧಿತ

**ನಂಬಿಕೆ**

ಕುತ್ತಿಗೆಯಲ್ಲಿ ಹಾಲ್ರಸಗ್ರಂಥಿಗಳು ಊದಿಕೊಳ್ಳುವುದನ್ನು ಆಡು ಭಾಷೆ ಯಲ್ಲಿ ಗಂಡಮಾಲೆ ಎಂದು ಹೇಳುವರು. ಈ ಗಂಟುಗಳು ಕರಗಬೇಕಾದರೆ ಹೊರಕಿವಿಯಲ್ಲಿ ರಂಧ್ರಕೊರೆದು ತಾಮ್ರದ ಉಂಗುರವನ್ನು ಹಾಕಿದರೆ ಗಂಟು ಕಡಿಮೆಯಾಗುವುವು ಎಂಬ ನಂಬಿಕೆ.

**ಆಚರಣೆ**

ಕುತ್ತಿಗೆಯಲ್ಲಿ ಹಾಲ್ರಸಗ್ರಂಥಿಗಳು ಊದಿಕೊಂಡು ಗಂಟುಗಂಟಾಗಿರು ತ್ತವೆ. ಇಂಥ ರೋಗಿಯನ್ನು ( ಬಹಳವಾಗಿ ಬಾಲಕ ಬಾಲಕಿಯರು ) ಕಿವಿ ಚುಚ್ಚುವ ತಜ್ಞರಲ್ಲಿಗೆ ಕರೆದುಕೊಂಡು ಹೋಗುವರು. ಅವರು ತಾಮ್ರದ ತಂತಿಯನ್ನು ಚೆನ್ನಾಗಿ ಕಾಸಿ ಹೊರಕಿವಿಯಲ್ಲಿ ರಂಧ್ರಮಾಡಿ ಪೋಣಿಸಿಬಿಡು ವರು ಹಾಗೂ ತಂತಿಯನ್ನು ಮಡಿಸಿ ಎರಡೂ ತುದಿಗಳನ್ನು ಜೋಡಿಸಿ ಉಂಗುರದಂತೆ ಮಾಡಿ ಕಿವಿಯಲ್ಲಿಯೇ ಜೋತಾಡಲು ಬಿಡುವರು. ತಾಮ್ರವು ಮೈಯೊಳಗೆಲ್ಲ ಚಲಿಸಿ ಕುತ್ತಿಗೆಯಲ್ಲಿಯ ಗಂಟುಗಳ ಮೇಲೆ ಕಾರ್ಯ ನಡೆಸಿ ರೋಗವನ್ನು ಗುಣಪಡಿಸುತ್ತದೆ ಎಂಬುದು ವಿಚಾರ.

### ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ

ಕುತ್ತಿಗೆಯಲ್ಲಿಯ ಹಾಲ್ರಸಗ್ರಂಥಿಗಳು ಊದಿಕೊಳ್ಳುವುದು ಹಲವಾರು ಕಾರಣಗಳಿಂದ. ಅವುಗಳಲ್ಲಿ ಮುಖ್ಯವಾದ ಕಾರಣಗಳೆಂದರೆ ಕ್ಷಯರೋಗ ಹಾಗೂ ಕ್ಯಾನ್ಸರ್ ಗಂಟುಗಳು. ಈ ರೋಗದಿಂದ ಬಳಲುವ ಮಕ್ಕಳಲ್ಲಿ ಕುತ್ತಿಗೆಯಲ್ಲಿಯ ಹಾಲ್ರಸಗ್ರಂಥಿಗಳು ಊದಿಕೊಳ್ಳುತ್ತವೆ ಹಾಗೂ ಕೊರಳಲ್ಲಿ ಕಟ್ಟಿದ ಮಾಲೆಯಂತೆ ಗೋಚರಿಸುತ್ತವೆ. ಇದನ್ನೇ ಜನರು ಕಂಠಮಾಲೆ ಅಥವಾ ಗಂಡಮಾಲೆ ಎಂದು ಕರೆಯುವರು. ಮೇಲೆ ಹೇಳಿದ ರೋಗಗಳು ದೇಹದಲ್ಲಿ ತಾಮ್ರದ ಕೊರತೆಯಿಂದ ಆಗುತ್ತದೆ ಎಂದೇನೋ ಅಲ್ಲ, ಕಾರಣ ತಾಮ್ರದ ತಂತಿಯಿಂದ ಕಿವಿ ಚುಚ್ಚುವುದು ಯಾವ ತತ್ವದಿಂದಲೂ ವೈಜ್ಞಾನಿಕವಲ್ಲ. ಇದ್ದ ತೊಂದರೆಯೊಡನೆ ಇನ್ನೊಂದು ತೊಂದರೆಯನ್ನು ಕೊಂಡಂತಾಗುತ್ತದೆ. ಅಲ್ಲದೆ ಮೊದಲಿದ್ದ ತೊಂದರೆಯೇ ಮುಂದುವರೆಸಲು ಹಸಿರು ನಿಶಾನೆಯನ್ನು ತೋರಿಸಿದಂತಾಗುತ್ತದೆ. ಕಾರಣ ಕುತ್ತಿಗೆಯಲ್ಲಿ ಮಕ್ಕಳಿಗೆ ಗಂಟುಗಳು ಮೂಡಿ ಕೊಂಡರೆ ತಕ್ಷಣವೇ ತಜ್ಞವೈದ್ಯರಿಗೆ ತೋರಿಸಿ ಅದರ ಕಾರಣವನ್ನು ಕಂಡು ಹಿಡಿಸಿ ಸೂಕ್ತ ಉಪಚಾರ ಮಾಡಿಸಬೇಕು ವಿನಾ ಕಿವಿ ಚುಚ್ಚಬಾರದು.

## ವಿಷ ಇಳಿಸುವಿಕೆಗೆ ಸಂಬಂಧಿತ

### ನಂಬಿಕೆ

ಕೆಲವರ ಕೈಯಲ್ಲಿ ಹುಟ್ಟಿದಾಗಿಸಿಂದಲೇ ಒಂದು ಗೆರೆ ಇರುತ್ತದೆ. ಇದನ್ನು "ಗರುಡರೇಖೆ" ಎನ್ನುವರು. ಇಂಥ ವ್ಯಕ್ತಿಗಳಲ್ಲಿ ಒಂದು ಶಕ್ತಿ ಇರುತ್ತದೆ ಅದರಿಂದ ಅವರು ಹಾವು ಕಡಿದ ವ್ಯಕ್ತಿಯ ದೇಹದಿಂದ ವಿಷವನ್ನು ಹೊರಬರು ವಂತೆ ಮಾಡುವರು ಎಂಬುದು.

### ಆಚರಣೆ

ಈ ವ್ಯಕ್ತಿಗಳು ಮಂತ್ರಿಸಿದ ಬಾವಿಗಳಿವೆ, ಗಿಡಗಳಿವೆ, ಹಾಗೂ ಅವರು ಕುಳಿತುಕೊಳ್ಳುವ ಕಲ್ಲುಗಳಿವೆ, ಹಾವು ಕಡಿಸಿಕೊಂಡವರು ಆಯಾ ಸ್ಥಳಗಳಿಗೆ ಹೋಗಿ ಆ ಬಾವಿಯಲ್ಲಿಯ ನೀರನ್ನು ಭಕ್ತಿಯಿಂದ ಹಾವು ಕಡಿದ ಸ್ಥಾನ

ದಲ್ಲಿ ಸುರುವಿಸಿಕೊಂಡರೆ ವಿಷ ಇಳಿಯುವುದು. ಇಲ್ಲವೆ ಆ ಕಲ್ಲಿನ ಸುತ್ತಲೂ ಪ್ರದಕ್ಷಿಣೆ ಮಾಡಿದರೆ ವಿಷ ಇಳಿಯುವುದು. ಇಲ್ಲವೆ ಗಿಡವನ್ನು ಸುತ್ತಿದರೆ ವಿಷ ಇಳಿಯುವುದು ಎಂಬ ನಂಬಿಕೆ. ಇವುಗಳಲ್ಲಿ ಯಾವುದಾದರೊಂದನ್ನು ಮಾಡುವವರೆಗೆ ಹಾವು ಕಡಿಸಿಕೊಂಡ ವ್ಯಕ್ತಿ ನಿದ್ದೆ ಮಾಡಬಾರದು ತೂಕಡಿಸ ಬಾರದು ಕಾರಣ ಅವನಿಗೆ ಅಥವಾ ಅವಳಿಗೆ ಬೇವಿನತೊಪ್ಪಲನ್ನು ತಿನ್ನಿಸುತ್ತಾರೆ ಹಾಗೂ ಒಡಾಡಿಸುತ್ತಾರೆ ಹಾಗೂ ಹಾವು ಕಡಿಸಿಕೊಂಡ ವ್ಯಕ್ತಿಯು ಮುಂದೆ ಭಜನೆ ಮಾಡುತ್ತಾರೆ.

## ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ

ಹಾವುಗಳಲ್ಲಿ ಬಹಳಷ್ಟು ಹಾವುಗಳು ವಿಷರಹಿತ ಹಾವುಗಳು. ಇವು ವ್ಯಕ್ತಿಯನ್ನು ಎಷ್ಟು ಬಾರಿ ಕಡಿದರೂ ಏನೂ ಆಗುವುದಿಲ್ಲ. ಇಂಥ ಹಾವುಗಳ ಸಂಖ್ಯೆಯೇ ಹೆಚ್ಚಿರುವುದರಿಂದ ಅನೇಕರಿಗೆ ಪ್ರಾಣಹಾನಿ ಆಗುವುದಿಲ್ಲ. ಇದರ ಲಾಭವನ್ನೇ ತೆಗೆದುಕೊಂಡು ಗರುಡರೇಖೆಯುಳ್ಳವರು ಮಂತ್ರಿಸಿ ನೀರು ಹಾಕು ವರು, ಗಿಡಸುತ್ತಿಸುವರು. ಇನ್ನೂ ವಿಷವುಳ್ಳ ಹಾವು ಕಚ್ಚಿದರೆ ವಿಷವು ರಕ್ತ ದಲ್ಲಿ ಸೇರಿ ವ್ಯಕ್ತಿಯು ಮರಣಕ್ಕೆ ಕಾರಣವಾಗುತ್ತದೆ. ಇಂಥ ಪ್ರಸಂಗದಲ್ಲಿ ಈ ವ್ಯಕ್ತಿಗಳು ಕೊಡುವ ಸಮಾಧಾನವೆಂದರೆ ಬಹಳ ತಡಮಾಡಿ ಬಂದರು ಎಂಬುದು. ಒಟ್ಟಿನಲ್ಲಿ ವಿಷದ ಹಾವಿನಿಂದ ಕಚ್ಚಿಸಿಕೊಂಡ ವ್ಯಕ್ತಿ ಇವರ ಮೂಢ ಆಚಾರದಿಂದ ತನ್ನ ಜೀವನವನ್ನು ಕಳೆದುಕೊಳ್ಳಬೇಕಾಗುತ್ತದೆ. ಅದರೆ ಇಂದು ವಿಜ್ಞಾನದ ಪ್ರಗತಿಯ ಫಲವಾಗಿ ಹಾವಿನ ವಿಷಕ್ಕೆ ಪ್ರತಿರೋಧಿಸುವ ಮದ್ದು ಗಳನ್ನು ತಯಾರಿಸಿರುತ್ತಾರೆ. ಈ ಮದ್ದುಗಳನ್ನು ತಕ್ಷಣವೇ ಹಾವು ಕಡಿಸಿ ಕೊಂಡ ವ್ಯಕ್ತಿಗಳಿಗ ಚುಚ್ಚಿದರೆ ಅವರು ಖಂಡಿತವಾಗಿಯೂ ಬದುಕಿ ಉಳಿ ಯುವರು. ಈ ಮದ್ದು ನೇರವಾಗಿ ವಿಷದೊಡನೆ ಕ್ರಿಯೆ ನಡೆಸಿ ವಿಷದ ಪರಿ ಣಾಮ ದೇಹದ ಮೇಲೆ ಆಗದಂತೆ ಮಾಡುತ್ತದೆ. ಇವೆಲ್ಲವನ್ನು ಬಿಟ್ಟು ನೀರು ಹಾಕಿಸಿಕೊಂಡು ಗಿಡವನ್ನು ಸುತ್ತಿ ಕಲ್ಲು ಪ್ರದಕ್ಷಿಣೆ ಮಾಡಿ ಜೀವಕಳೆದು ಕೊಳ್ಳುವುದು ತಪ್ಪಬೇಕು.

# ಚೇಳು ಕಡಿದಾಗ ಹಾಲು ಕುಡಿಸುವುದು

**ನಂಬಿಕೆ**

ಚೇಳು ಕಡಿಸಿಕೊಂಡ ವ್ಯಕ್ತಿಗೆ ಹಾಲು ಕುಡಿಯಲು ಕೊಡುವರು.

**ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ**

ಹಾವಿನ ಹಲ್ಲಿನಲ್ಲಿ ವಿಷವಿರುವಂತೆ ಚೇಳಿನಕೊಂಡಿಯಲ್ಲಿಯೂ ವಿಷ ಇರುತ್ತದೆ. ಈ ವಿಷ ದೇಹವನ್ನು ಸೇರಿದಾಗ ವಿಷದ ಪರಿಣಾಮ ದೇಹದ ಮೇಲೆ ಆಗುವುದು. ಕೆಲವು ಚೇಳು ಕಡಿದಾಗ ಕೇವಲ ಉರುಪು ಕಂಡು ಕಡಿಮೆ ಯಾಗಬಹುದು. ಇನ್ನೂ ಕೆಲವು ಚೇಳುಗಳು ಕಡಿದಾಗ ವ್ಯಕ್ತಿಯು ಮರಣ ಹೊಂದಬಹುದು. ಕಾರಣ ಚೇಳು ಕಡಿದ ವ್ಯಕ್ತಿಯನ್ನು ತಕ್ಷಣವೇ ವೈದ್ಯ ರಲ್ಲಿಗೆ ಕರೆದುಕೊಂಡು ಹೋಗಿ ಸೂಕ್ತ ಉಪಚಾರ ಮಾಡಿಸಬೇಕು. ಚೇಳಿನ ಕಡಿತವನ್ನು ಮರೆಯುವಂತೆ ಮಾಡಲು ಹಾಲು ಕುಡಿಸಿ ಸುಮ್ಮನೆ ಬಿಡಬಾರದು.

# ಭಯ ನಿವಾರಣೆಗೆ ಕಬ್ಬಿಣದ ನೀರು

**ನಂಬಿಕೆ**

ಚಿಕ್ಕ ಮಕ್ಕಳು ಏನಾದರೂ ನೋಡಿ ಹೆದರಿಕೊಂಡಿದ್ದರೆ ಅವರ ಹೃದಯ ಒಂದೇ ಸಮನೇ ಬಡಿದುಕೊಳ್ಳುತ್ತದೆ. ಇದಕ್ಕೆ ಕಾರಣವೆಂದರೆ ಅವರ ಹೃದಯ ಗಟ್ಟಿಯಾಗಿರುವುದಿಲ್ಲ. ಹೃದಯ ಗಟ್ಟಿಯಾಗಿರಬೇಕಾದರೆ ಮಗುವಿಗೆ ಕಬ್ಬಿಣದ ನೀರನ್ನು ಕುಡಿಸಬೇಕು. ನೀರಲ್ಲಿಯ ಕಬ್ಬಿಣವು ಹೃದಯವನ್ನು ಸೇರಿ ಮಗು ವಿನ ಹೃದಯ ಬಲಗೊಳ್ಳುವುದು.

**ಆಚರಣೆ**

ತನ್ನ ಎದೆಯಲ್ಲಿ ಗುಡುಗುಡು ಆಗುವುದು ಎಂದು ಮಗುವು ಮನೆಯಲ್ಲಿ ಹೇಳಿದರೆ ತಂದೆ ತಾಯಿಗಳಿಗೆ ಮಗುವು ಹೆದರಿಕೊಂಡಿದೆ ಎಂದು ಅಂದಾಜು ಅವರಿಗೆ ಇವರಿಗೆ ಹೇಳುವಾಗ ಕಬ್ಬಿಣದ ನೀರು ಕುಡಿಸಲು ಉಪದೇಶ ಬರು ವುದು. ಒಂದು ಕಬ್ಬಿಣದ ಸಲಾಕೆಯನ್ನು ಅಥವಾ ಕುಡುಗೋಲನ್ನು ಇಲ್ಲವೆ ಕೊಡಲಿಯನ್ನು ಬೆಂಕಿಯಲ್ಲಿಟ್ಟು ಕೆಂಪಗಾಗುವಂತೆ ಕಾಯಿಸುತ್ತಾರೆ. ಕೆಂಪಗಾದ ಕಬ್ಬಿಣ ವಸ್ತುವನ್ನು ನೀರಿರುವ ಪಾತ್ರೆಯಲ್ಲಿ ಅದ್ದುತ್ತಾರೆ. ನೀರಿನಲ್ಲಿ ಕಬ್ಬಿಣ ಸುಂಯ್ ಗುಡುತ್ತದೆ. ಈ ನೀರನ್ನು ಮಕ್ಕಳಿಗೆ ಕುಡಿಯಲು ಕೊಡುತ್ತಾರೆ.

**ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ**

ಬಹುಶಃ ಚಿಕ್ಕಮಕ್ಕಳಲ್ಲಿ ಕಬ್ಬಿಣದ ಕೊರತೆ ಇರುವುದರಿಂದ ಬರುವ ರಕ್ತ ಕೊರೆಗೆ ಈ ತಂತ್ರ ಒಂದು ಉಪಚಾರವಾಗಿರಲು ಸಾಧ್ಯ. ಕಬ್ಬಿಣದ ಅಂಶವಿರುವ ಮಾತ್ರೆಗಳು ದೊರೆಯುವುದಕ್ಕಿಂತ ಪೂರ್ವದಲ್ಲಿ ಈ ಉಪಚಾರ ಬಳಕೆಯಲ್ಲಿ ಇದ್ದರೂ ಇದ್ದಿರಬಹುದು. ಈ ಉಪಚಾರದಿಂದ ಮಗುವಿನ ದೇಹ ದಲ್ಲಿ ಸ್ವಲ್ಪಮಟ್ಟಿಗೆ ಕಬ್ಬಿಣದ ಅಂಶ ಸೇರುವುದು. ಒಂದು ವೇಳೆ ರಕ್ತದ ಕೊರತೆಯಿಂದ ಮಗುವು ಬಳಲುತ್ತಿದ್ದರೆ ಹಾಗೂ ಎದೆ ಬಡಿತ ಅದರಿಂದಲೇ ಆಗಿದ್ದರೆ ಎದೆ ಬಡಿತದಲ್ಲಿ ಸುಧಾರಣೆ ಕಾಣುವುದು ಸಾಧ್ಯ.

ಆದರೆ ಹೃದಯ ಬಡಿತಕ್ಕೆ ಹಲವಾರು ಕಾರಣಗಳಿವೆ ಕೇವಲ ರಕ್ತ ಕೊರತೆಯೊಂದೇ ಅಲ್ಲ. ಒಂದು ಪಕ್ಷ ಬೇರೆ ಕಾರಣದಿಂದ ಹೃದಯ ಬಡಿದುಕೊಳ್ಳುತ್ತಿದ್ದರೆ ಕಬ್ಬಿಣದ ನೀರಿನ ಉಪಚಾರ ನಿರರ್ಥಕ. ಅಲ್ಲದೆ ಹೃದಯದ ಮೇಲೆ ತನ್ನ ಕೆಟ್ಟ ಪ್ರಭಾವವನ್ನು ಬೀರುತ್ತಿರುವ ರೋಗವು ತನ್ನ ವಿನಾಶಕಾರ್ಯವನ್ನು ಮುಂದುವರೆಸುತ್ತದೆ. ಆದ್ದರಿಂದ ಮಗುವು ಹೃದಯ ಬಡಿಯುತ್ತಿದೆ ಎಂದು ಹೇಳಿದಾಗ ವೈದ್ಯರಿಗೆ ತೋರಿಸಿ ಅದರ ಪರಿಹಾರ ಕಂಡುಕೊಳ್ಳುವುದು ಜಾಣತನ

# ನಿಂಬೆ ಹಣ್ಣಿನಿಂದ ಹಲ್ಲು ಹುಜ್ಜುವುದು

**ನಂಬಿಕೆ**

ನಿಂಬೆಯ ರಸ ಎಲ್ಲ ಕೊಳೆಯನ್ನು ತೆಗೆದು ಹಾಕುವುದು

**ಆಚರಣೆ**

ಮುಂಜಾನೆ ಹಲ್ಲುಪುಡಿ ಅಥವಾ ಗಿಡದ ಟೊಂಗೆ, ಇದ್ದಿಲುಪುಡಿಗಳಿಂದ ಹಲ್ಲು ಉಜ್ಜದೆ ಅರ್ಧ ನಿಂಬೆಹಣ್ಣನ್ನು ತೆಗೆದುಕೊಂಡು ಚೆನ್ನಾಗಿ ಮೇಲ್ದವಡೆಯ ಹಾಗೂ ಕೆಳದವಡೆಯ ಹಲ್ಲುಗಳನ್ನು ಉಜ್ಜಿ ನೀರು ಮುಕ್ಕಳಿಸಿ ಬಿಡುವರು.

**ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ**

ನಿಂಬೆಹಣ್ಣಿನಲ್ಲಿ ಸಿಟ್ರಿಕ್ (Citric) ಆಮ್ಲ ಇರುತ್ತದೆ. ಆಮ್ಲವು ಹಲ್ಲಿನ ಸಂಪರ್ಕದಲ್ಲಿ ಬಂದಾಗ ಹಲ್ಲುಗಳ ಮೇಲಿರುವ ಬಿಳಿ ಮಿಂಚುವ

ಬಹಳ ಬಿಸುಸಾಗಿರುವ ಪದಾರ್ಥ ಕರಗಿಹೋಗುತ್ತದೆ. ಇದನ್ನೆ ನಾವು ಹಲ್ಲು ಚುಳಿಯುವುದು ಎಂದು ಹೇಳುತ್ತೇವೆ. ದಿನಾಲೂ ನಿಂಬೆಹಣ್ಣಿನಿಂದ ಹಲ್ಲು ಉಜ್ಜ ತೊಡಗಿದರೆ ಈ ರಕ್ಷಕ ಕವಚ ಕ್ರಮೇಣ ನಶಿಸಿಹೋಗುವುದು. ಆಗ ಹಲ್ಲಿನೊಳಗಿರುವ ಮೃದು ಭಾಗವು ಹೊರಬರುತ್ತದೆ. ಹಾಗೂ ಬಹು ಬೇಗನೆ ಕರಗಿಹೋಗಲು ಪ್ರಾರಂಭವಾಗುತ್ತದೆ. ಇದರಿಂದ ಹಲ್ಲುಗಳು ನಶಿಸುತ್ತಾ ನಶಿಸುತ್ತಾ ಕೊನೆಗೆ ಇಲ್ಲದಂತಾಗಬಹುದು. ಮುಂದೆ ಈ ಜನರು ಅದೇ ತತ್ವವನ್ನು ತಮ್ಮ ಹಲ್ಲಿಗೂ ಅನ್ವಯಿಸಲು ಪ್ರಾರಂಭಿಸುತ್ತಾರೆ. ಹಣ್ಣಿನ ರಸ ಪಾತ್ರೆಗಳ ಮೇಲೆ ಕ್ರಿಯೆ ನಡೆಸಿ ಅದರ ಒಂದು ಪದರವನ್ನು ಕಳಚಿಬಿಡುತ್ತದೆ. ಹೀಗೆಯೇ ಅದರ ಕಾರ್ಯ ಹಲ್ಲಿನ ಮೇಲೂ ನಡೆದು ವ್ಯಕ್ತಿಗಳು ತೊಂದರೆಯಲ್ಲಿ ಸಿಲುಕುತ್ತಾರೆ, ಕಾರಣ ಹಲ್ಲುಜ್ಜುವ ಯಾವುದೇ ಪದಾರ್ಥ ಆಮ್ಲಕಾರಕ ಇರಬಾರದು. ಅದೇ ರೀತಿ ಹಲ್ಲುಜ್ಜುವ ವಸ್ತು ಹೆಚ್ಚು ಕ್ಷಾರಮಯವೂ ಇರಬಾರದು-

## ಕಾಶಿ ಗಿಂಡಿ ಹಿತ್ತಾಳೆ ತಂಬಿಗೆಯಲ್ಲಿಯ ನೀರು ಕುಡಿಯುವುದು

**ನಂಬಿಕೆ**

ಕಾಶಿಗಿಂಡಿಯಲ್ಲಿ ಅಂದರೆ ತಾಮ್ರದ ಪಾತ್ರೆಯಲ್ಲಿ ಹಾಗೂ ಹಿತ್ತಾಳೆ ಪಾತ್ರೆಗಳಲ್ಲಿ ಶೇಖರಿಸಿದ ನೀರು ರೋಗಾಣುಗಳಿಂದ ಮುಕ್ತಾಯವಾಗಿರುತ್ತದೆ ಎಂಬ ನಂಬಿಕೆ

**ಆಚರಣೆ**

ರಾತ್ರಿ ಮಲಗುವಾಗ ಒಂದು ಹಿತ್ತಾಳೆ ಅಥವಾ ತಾಮ್ರದ ತಂಬಿಗೆಯಲ್ಲಿ ನೀರನ್ನು ತುಂಬಿಟ್ಟುಕೊಂಡು ಮಲಗುವುದು, ನಸುಕಿನಲ್ಲಿ ಎದ್ದು ತಂಬಿಗೆಯಲ್ಲಿಟ್ಟ ನೀರನ್ನೆಲ್ಲ ಕುಡಿದು ಬಿಡುವರು. ಇಂಥ ನೀರನ್ನು ಮಕ್ಕಳಿಗೂ ಕುಡಿಸುವುದು ಆಚರಣೆಯಲ್ಲಿದೆ.

**ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ**

ಹಿತ್ತಾಳೆ ಹಾಗೂ ತಾಮ್ರದ ಪಾತ್ರೆಯಲ್ಲಿ ಶೇಖರಿಸಿಟ್ಟ ನೀರಿನೊಳಗೆ ತಾಮ್ರದ ಅಣುಗಳು ದೊಡ್ಡ ಪ್ರಮಾಣದಲ್ಲಿ ಸೇರಿಕೊಳ್ಳುತ್ತವೆ. ಹೀಗೆ

ತಾಮ್ರದ ಪರಮಾಣುಗಳು ಸೇರಿಕೊಂಡ ನೀರನ್ನು ಕುಡಿಯುವುದರಿಂದ ದೇಹ ದಲ್ಲಿ ತಾಮ್ರದ ಪರಮಾಣುಗಳು ಹೆಚ್ಚು ಪ್ರಮಾಣದಲ್ಲಿ ಸೇರುತ್ತವೆ. ದೇಹವು ಈ ಹೆಚ್ಚು ಪ್ರಮಾಣದ ಪರಮಾಣುಗಳನ್ನು ಹೊರಹಾಕಲು ಸಾಧ್ಯವಾಗದೆ ಹೋದರೆ ಅವು ವಿವಿಧ ಅಂಗಾಂಶಗಳಲ್ಲಿ ಸೇರಿಕೊಂಡು ದೇಹಕ್ಕೆ ಹಾನಿ ಯನ್ನುಂಟು ಮಾಡುತ್ತವೆ. ಈ ಸಂಗತಿಯನ್ನು ತಿಳಿದುಕೊಂಡು ಇಂತಹ ಪ್ರಮಾದವನ್ನು ತಪ್ಪಿಸುವುದು ಒಳ್ಳೆಯದು.

# ಹಿತ್ತಾಳೆ ಅಥವಾ ತಾಮ್ರದ ಪಾತ್ರೆಗಳಲ್ಲಿ ಹಾಲು ಕಾಯಿಸುವುದು

**ನಂಬಿಕೆ**

ಬಹಳ ಕಾಲದಿಂದ ಭಾರತದಲ್ಲಿ ಹಿತ್ತಾಳೆ ಹಾಗೂ ತಾಮ್ರಗಳನ್ನು ಪಾತ್ರೆ ತಯಾರಿಸಲು ಬಳಸುತ್ತಿದ್ದರು. ಈ ಪಾತ್ರೆಗಳನ್ನು ಚೆನ್ನಾಗಿ ಸ್ವಚ್ಛ ಗೊಳಿಸಲು ಅನುಕೂಲವಿರುತ್ತಿತ್ತು.

**ಆಚರಣೆ**

ನಿರ್ಮಲವಾವ ಥಳ ಥಳ ಹೊಳೆಯುವ ಹಿತ್ತಾಳೆ ಪಾತ್ರೆಗಳಲ್ಲಿ ಹಾಲನ್ನು ತೆಗೆದುಕೊಂಡು ಅದನ್ನು ಕುದಿಸುವ ರೂಢಿ ಅನೇಕರಲ್ಲಿ ಇತ್ತು. ಹೀಗೆ ಕುದಿ ಸಿದ ಹಾಲನ್ನು ಚಿಕ್ಕಮಕ್ಕಳಿಗೆ ಕುಡಿಸುತ್ತಿದ್ದರು.

**ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ**

ಈಗಾಗಲೇ ಹೇಳಿದಂತೆ ಹಿತ್ತಾಳೆಯ ಪಾತ್ರೆಯಲ್ಲಿಟ್ಟ ಯಾವುದೇ ಪದಾರ್ಥವಾಗಲಿ ಪೇಯವಾಗಲಿ ಹಿತ್ತಾಳೆಯಿಂದ ದೊಡ್ಡ ಪ್ರಮಾಣದ ಹಿತ್ತಾಳೆ ಪರಮಾಣುಗಳನ್ನು ತೆಗೆದುಕೊಳ್ಳುವುದು. ಇದನ್ನು ಅರಿತ ಜನರು ತಳಕ್ಕೆ ಕಿಲುಬು ಹಿಡಿಯುವುದು ಎಂದು ಹೇಳುತ್ತಿದ್ದರು. ಕಾರಣವೇ ಪಾತ್ರೆ ಕಿಲುಬು ಹಿಡಿಯಬಾರದು ಎಂದು ಹಿತ್ತಾಳೆಯ ಪಾತ್ರೆಗಳಿಗೆ ತವರಿನ ಕಲಾಯಿ ಮಾಡಿಸುತ್ತಿದ್ದರು. ಕಲಾಯಿ ಇಲ್ಲದ ಪಾತ್ರೆ ಕಿಲುಬು ಹಿಡಿಯುತ್ತ ತಾಮ್ರದ ಪರಮಾಣುಗಳನ್ನು ಬಿಡುತ್ತಲೇ ಹೋಗುವುದು. ಇಂಥ ಹಾಲನ್ನಾಗಲಿ ಬೇರೆ ಯಾವುದೇ ಪೇಯವನ್ನಾಗಲಿ ಮಗುವಿಗೆ ಕುಡಿಸಿದರೆ ಮಗುವಿನ ದೇಹದಲ್ಲಿ

ತಾಮ್ರದ ಪರಮಾಣುಗಳು ದೊಡ್ಡ ಪ್ರಮಾಣದಲ್ಲಿ ಸೇರಿಕೊಂಡು ಮಗುವಿನ ಯಕೃತ್ತಿನ ಮೇಲೆ ಹಾನಿಕಾರಕ ಪ್ರಭಾವ ಬೀರಿ ಯಕೃತ ಸಿರೋಸಿಸ್ (Cirrhosis) ಎಂಬ ಗುಣವಾಗದ ರೋಗವನ್ನು ತರುತ್ತದೆ. ಇಂಥ ಸಿರೋಸಿಸ್ ರೋಗಕ್ಕೆ (Indian Childhood Cirrhosis) ಎಂದು ಕರೆಯುತ್ತಿದ್ದರು. ಈ ರೋಗದ ಮೇಲೆ ಅನೇಕ ವರ್ಷ ಸಂಶೋಧನೆಗಳು ನಡೆದು ಇಂದು ಈ ರೋಗಕ್ಕೆ ಹಿತ್ತಾಳೆಯ ಪಾತ್ರೆಗಳೇ ಕಾರಣವೆಂದು ದೃಢಪಡಿಸಲಾಗಿದೆ ಸುದೈವದಿಂದ ಅಲ್ಯುಮಿನಿಯಂ ಹಾಗೂ ಸ್ಟೇನ್‌ಲೆಸ್ ಸ್ಟೀಲ್ ಪಾತ್ರೆಗಳು ಹಿತ್ತಾಳೆಯ ಪಾತ್ರೆಗಳಿಗಿಂತ ಸೋವಿದರದಲ್ಲಿ ಸಿಗುವುದರಿಂದ ಹಿತ್ತಾಳೆಯ ಪಾತ್ರೆ ಈಗ ಬಳಸಲ್ಪಡುವುದಿಲ್ಲ. ಕ್ರಮೇಣವಾಗಿ ಈ ಪಾತ್ರೆ ಇದ್ದವರು ಆ ಪಾತ್ರೆಗಳನ್ನು ಉಪಯೋಗಿಸುತ್ತಿಲ್ಲ. ಈ ಕಾರಣಗಳಿಂದ ಇತ್ತಿತ್ತಲಾಗಿ (Indian Childhood Cirrhosis) ರೋಗವು ಮಾಯವಾಗ ತೊಡಗಿದೆ.

# ಪಂಚಗವ್ಯ

**ನಂಬಿಕೆ**

ಪಂಚಗವ್ಯ ಸೇವಿಸುವುದರಿಂದ ಪುಣ್ಯ ಪ್ರಾಪ್ತಿಯಾಗುತ್ತದೆ ಹಾಗೂ ಪಾಪ ನಾಶವಾಗುತ್ತದೆ. ಅಲ್ಲದೆ ಕೆಲವು ರೋಗ ರುಜಿನಗಳು ಕಡಿಮೆಯಾಗುತ್ತವೆ.

**ಆಚರಣೆ**

ಪಂಚಗವ್ಯ ಎಂದರೆ ಆಕಳ ಐದು ಸ್ರವಿಕೆಗಳನ್ನು ಕೂಡಿಸಿ ಮಾಡಿದ ಪಾನೀಯ. ಪಂಚಗವ್ಯದಲ್ಲಿ ಆಕಳ ಹಾಲು, ಮೊಸರು, ತುಪ್ಪ, ಮೂತ್ರ ಹಾಗೂ ಸಗಣಿಗಳನ್ನು ಕೂಡಿಸಿರುತ್ತಾರೆ. ಇದನ್ನು "ಪಂಚಗವ್ಯ" ಎಂದು ಕರೆದು ಪೂಜೆ ಮಾಡುವ ಭಡಜಿಗಳು ಎಲ್ಲರಿಗೂ ತೀರ್ಥವೆಂದು ಕೊಟ್ಟು ಸೇವಿಸಲು ಉಪದೇಶಿಸುತ್ತಾರೆ. ತೀರ್ಥದ ರೂಪದಲ್ಲಿ ಬರುವ ಈ ಪಾನೀಯವನ್ನು ಒಂದು ಹನಿಯಷ್ಟಾದರೂ ಕೆಳಗೆ ಚೆಲ್ಲುವಂತಿಲ್ಲ, ಎಲ್ಲವನ್ನು ಭಕ್ತಿಯಿಂದ ಸೇವಿಸಲೇಬೇಕು.

### ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ

ಹಾಲಿನಿಂದ ಉಂಟಾಗಬಹುದಾದ ರೋಗಾಣು ಕಶ್ಮಲತೆ ಪಂಚಗವ್ಯದಲ್ಲಿ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಇರುವುದು. ಹಾಲಿನಲ್ಲಿರಬಹುದಾದ, ಮೂತ್ರದಲ್ಲಿರಬಹುದಾದ, ಸಗಣಿಯಲ್ಲಿರಬಹುದಾದ, ರೋಗಾಣುಗಳನ್ನು ನಾವು ಮುಗ್ಧರಾಗಿ ಭಕ್ತಿಯಿಂದ ಸೇವಿಸುತ್ತೇವೆ. ಹೀಗೆ ಪಂಚಗವ್ಯವನ್ನು ಸೇವಿಸಿದ ಒಂದು ಇಡಿ ಕುಟುಂಬವೆ ಬ್ರೂಸೆಲ್ಲ ರೋಗದಿಂದ ಬಳಲಿತು ಎಂಬುದನ್ನು ನಾನು ಇಲ್ಲಿ ತಿಳಿಯಪಡಿಸುತ್ತೇನೆ. ಪಂಚಗವ್ಯದಲ್ಲಿರುವ ಶಕ್ತಿ ಅದರಲ್ಲಿರುವ ಔಷಧದ ಪ್ರಭಾವದ ಬಗ್ಗೆ ಯಾರೂ ಸಂಶೋಧನೆ ನಡೆಸಿಲ್ಲ. ಅದು ಒಳ್ಳೆಯದೆಂದು ಯಾವ ವಿಜ್ಞಾನಿಯೂ ಖಚಿತಗೊಳಿಸಿಲ್ಲ. ಆದರೆ ಅದರಿಂದ ಆಗಬಹುದಾದ ಹಾನಿಗಳ ಬಗ್ಗೆ ತಡವಿಲ್ಲದೆ ಮನವರಿಕೆ ಮಾಡಬಹುದು. ಕಾರಣ, ಸಾಧ್ಯವಾದಷ್ಟು ಈ "ಪಂಚಗವ್ಯ"ದ ಹಾನಿಯನ್ನು ತಡೆಯುವುದು ಲೇಸು.

## ಮರದ ಗಾಳಿ ಹತ್ತುವುದು

### ನಂಬಿಕೆ

ಕಾಳು ಕೇರುವ ಮರದ ಗಾಳಿ ಕೂಸಿಗೆ ತಗುಲಿದರೆ ಕೂಸು ಬಡವಾಗುತ್ತ ಹೋಗುತ್ತದೆ ಎಂಬ ತಿಳಿವಳಿಕೆ.

### ಆಚರಣೆ

ಒಬ್ಬಂಟಿಗರಾದ ಸ್ತ್ರೀಯರು ಮನೆಯಲ್ಲಿ ಕಾಳು ಸ್ವಚ್ಛಗೊಳಿಸುತ್ತಿರುವಾಗ ಮಗುವನ್ನು ಮಗ್ಗುಲಲ್ಲಿಯೇ ಮಲಗಿಸಿಕೊಂಡು ಅದರೊಡನೆ ಮಾತನಾಡುತ್ತ ಕೇರುವುದು ಸಾಮಾನ್ಯ. ಇಲ್ಲವೆ ಕಾಳು ಕೇರುತ್ತಿರುವಾಗ ಮಗುವು ಆ ಸ್ಥಳಕ್ಕೆ ಬರಬಹುದು.

### ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ

ವೈಜ್ಞಾನಿಕವಾಗಿ ಈ ವಿಚಾರಕ್ಕೆ ಯಾವುದೇ ತಳಬುಡವಿಲ್ಲ. ಎಂತಹ ಗಾಳಿ ಮಗುವಿಗೆ ಬಡಿದರೂ ಅದಕ್ಕೆ ಯಾವ ತೊಂದರೆಯೂ ಆಗಲಾರದು. ವಾಸ್ತವಿಕವಾಗಿ ಮಗುವಿನ ಪೋಷಣೆ ಸರಿಯಾಗಿ ಇರುವುದಿಲ್ಲ. ಕಾರಣವೇ ಮಗುವು ದಷ್ಟಪುಷ್ಟವಾಗಿ ಬೆಳೆಯುವುದಿಲ್ಲ. ಇದನ್ನೇ ಮರದ ಗಾಳಿ ಹತ್ತಿದೆ

ಎಂದು ಹೇಳಿ ಬೇರೆ ತಂತ್ರ ಮಾಡಿಸುತ್ತ ಕಾಲ ಕಳೆಯುವರು. ಇಂತಹ ಮಕ್ಕಳಿಗೆ ಪೌಷ್ಟಿಕ ಆಹಾರವನ್ನೊದಗಿಸಿದರೆ ಅವು ಚೆನ್ನಾಗಿ ಬೆಳೆದೇ ಬೆಳೆಯುತ್ತವೆ. ಕಾರಣ ಮರದ ಗಾಳಿಯಲ್ಲಿ ಯಾವುದೇ ವಿಷಪ್ರಭಾವ ಇರುವುದಿಲ್ಲ.

# ಮುಟ್ಟು ದೋಷ

**ನಂಬಿಕೆ**

ಸ್ತ್ರೀಯು ತಿಂಗಳಿಗೊಮ್ಮೆ ರಜಸ್ವತಿಯಾಗುವುದು ಅಥವಾ ಮುಟ್ಟಾಗುವುದು, ಹೊರಗೆ ಕೂಡ್ರುವದು ಸಾಮಾನ್ಯ ದೈಹಿಕ ನಿಯಮ. ಯಾವುದೋ ಕಾರಣದಿಂದ ಮುಟ್ಟು ಅಂದರೆ ವಿಸರ್ಜಿಸಲ್ಪಡುತ್ತಿರುವ ರಕ್ತ ಹಾನಿಕಾರಕ ರೋಗಕಾರಕ ಎಂಬ ಭಾವನೆ ಕೆಲವು ವರ್ಗಗಳಲ್ಲಿ ಮನೆಮಾಡಿಕೊಂಡಿವೆ. ಇಂಥ ಸ್ತ್ರೀಯು ಚಿಕ್ಕಮಕ್ಕಳನ್ನು ಮುಟ್ಟಿದರೆ ಮಕ್ಕಳಿಗೆ ಮುಟ್ಟುದೋಷ ಎಂಬ ಕಾಯಿಲೆ ಆಗುವುದೆಂದು ನಂಬಿಕೆ.

**ಆಚರಣೆ**

ಈ ನಂಬಿಕೆಯ ಆಧಾರದ ಮೇಲೆ ಮುಟ್ಟಾದ ಹೆಂಗಸು ಮಕ್ಕಳನ್ನು ಮುಟ್ಟದೆ ದೂರವಿರುತ್ತಾಳೆ. ಅಕಸ್ಮಾತ್ತಾಗಿ ಮುಟ್ಟಿದರೆ ಮಕ್ಕಳನ್ನು ತಕ್ಷಣ ಸ್ನಾನ ಮಾಡಿಸಿ ಮಡಿ ಮಾಡಬೇಕಾಗುತ್ತದೆ. ಮಡಿ ಮಾಡದೆ ಹೋದರೆ ರೋಗ ಬರುತ್ತದೆ ಎಂಬ ಭಯ.

**ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ**

ನಮ್ಮ ಜನರು ಮುಟ್ಟುದೋಷ ಎಂದು ಕರೆಯುತ್ತಿದ್ದ ರೋಗವು "ರಿಕೆಟ್ಸ್" ಎಂದು ಗುರಿತಿಸಲಾಗಿದೆ. ಈ ರೋಗ ಬರಲು ದೇಹದಲ್ಲಿಯ ಜೀವ ಸತ್ವ "ಡಿ"ಯ ಅಭಾವ ಇರುತ್ತದೆ. ಇದನ್ನು ತಿಳಿಯದೆ ಮಗುವಿಗೆ ಮುಟ್ಟುದೋಷವಾಗಿದೆ ಎಂದು ತಂತ್ರಗಳನ್ನು ಮಾಡಿಸುತ್ತಾ ಕಾಲಹರಣ ಮಾಡುತ್ತಿದ್ದರು. ಇತ್ತಿತ್ತಲಾಗಿ ಈ ಸಂಗತಿ ಬಹಳ ಜನರಿಗೆ ತಿಳಿದ ಕಾರಣ ಮುಟ್ಟು ದೋಷ ಮಾಯವಾಗತೊಡಗಿದೆ.

## ಲೋಳ್ ಹೊಡೆಯುವುದು ಇಲ್ಲವೆ ಕೇರು ಹಾಕುವುದು

**ನಂಬಿಕೆ**

ಅರೆ ತಲೆನೋವು ಕಾಣಲು ಆ ಭಾಗದ ಮೂಗಿನಲ್ಲಿ ಮಲಿನ ರಕ್ತ ಶೇಖರಗೊಂಡಿರುತ್ತದೆ. ಈ ಮೇಲಿನ ರಕ್ತವನ್ನು ಹೊರಚೆಲ್ಲಿದರೆ ಅರೆತಲೆ ನೋವು ಗುಣವಾಗುವುದು ಎಂಬ ನಂಬಿಕೆ.

**ಆಚರಣೆ**

ಅರೆತಲೆನೋವಿನಿಂದ ಬಳಲುತ್ತಿರುವ ವ್ಯಕ್ತಿಗಳನ್ನು ಕೆಲವು ನುರಿತ ತಂತ್ರ ಮಾಡುವವರ ಹತ್ತಿರ ಕರೆದುಕೊಂಡು ಹೋಗುತ್ತಾರೆ. ಅವರು ಲೋಳೆ ರಸದಿಂದ ಆ ಬದಿಯ ಮೂಗಿನಲ್ಲಿ ಹೊಡೆದು ಮೂಗಿನಿಂದ ರಕ್ತ ಚಿಮ್ಮುವಂತೆ ಮಾಡುತ್ತಾರೆ. ಇಲ್ಲವೆ ಆ ಬದಿಯ ಮೂಗಿನೊಳಗೆ ಕೇರು ಹಾಕಿ ಹುಣ್ಣಾಗುವಂತೆ ಮಾಡಿ ಅದರಿಂದ ರಕ್ತ ಸ್ರವಿಸುವಂತೆ ಮಾಡುತ್ತಾರೆ.

**ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ**

ಅರೆತಲೆನೋವಿಗೆ ಹಲವಾರು ಕಾರಣಗಳಿವೆ. ಮೂಗಿನ ಯಾವುದೇ ಒಂದು ಭಾಗದಲ್ಲಿ ಕೆಟ್ಟ ರಕ್ತ ಮಲೆಯುತ್ತದೆ ಎಂಬ ತಿಳುವಳಿಕೆ ನಿಜವಲ್ಲ ರಕ್ತವು ಯಾವ ಭಾಗದಲ್ಲಿಯೂ ಒಂದೇ ಕಡೆಗೆ ಮಲೆಯುವುದಿಲ್ಲ ಅದು ಸದಾ ಕಾಲ ದೇಹದಲ್ಲಿ ಸುತ್ತುತ್ತಲೇ ಇರುತ್ತದೆ.

ಮೂಗಿನಲ್ಲಿ ಲೋಳ್ ಹೊಡೆದು ಅಥವಾ ಕೇರುಹಾಕಿ ರಕ್ತಸ್ರಾವ ಆಗುವಂತೆ ಮಾಡುವುದರಿಂದ ಕೇವಲ ದೇಹದಲ್ಲಿಯ ರಕ್ತ ಸೋರಿಹೋಗುತ್ತದೆ ವಿನಹ ಹೆಚ್ಚಿನ ಯಾವ ಲಾಭವೂ ಆಗುವುದಿಲ್ಲ. ಅಲ್ಲದೆ ಮೂಗಿನೊಳಗೆ ಹುಣ್ಣಾದರೆ ಅದು ರೋಗಾಣುಗಳಿಂದ ಕಶ್ಮಲಗೊಂಡು ಕೀವು ಸುರಿಯುತ್ತಾ ಬೇರೆ ತೊಂದರೆಗಳು ಉದ್ಭವಿಸಲು ಸಾಧ್ಯ. ಕಾರಣ ಇಂಥ ಮೂಢ ವಿಚಾರಗಳನ್ನು ತಪ್ಪಿಸಬೇಕು.

## ನಾಯಿ ಕಡಿದರೆ ನೀರು ಹಾಕುವುದು

**ನಂಬಿಕೆ**

ನಾಯಿ ಕಡಿದರೆ ನಾಯಿಹುಚ್ಚು ಬರುವುದು ಎಂಬ ಭೀತಿ. ಹುಚ್ಚುಹಿಡಿಯುವದನ್ನು ತಪ್ಪಿಸಬೇಕಾದರೆ ತಂತ್ರವಾದಿಗಳಿಂದ ಅಥವಾ ಮಂತ್ರವಾದಿ

ಗಳಿಂದ ನಾಯಿ ಕಡಿದ ಭಾಗದ ಮೇಲೆ ನೀರು ಹಾಕಿಸಬೇಕು ಅಂದರೆ ಹುಚ್ಚು ಹಿಡಿಯದು.

**ಆಚರಣೆ**

ಕೆಲವು ಮಂತ್ರವಾದಿಗಳು ತಮ್ಮ ಊರಿನಲ್ಲಿರುವ ನೀರನ್ನು ಮಂತ್ರಿಸಿ ತಂಬಿಗೆಯಿಂದ ಆ ಭಾಗದ ಮೇಲೆ, ನೀರು ಸುರಿಯುತ್ತಾರೆ. ಇದರಿಂದ ರೋಗ ಬರದು ಎಂದು ಹೇಳಿ ಕಳುಹಿಸುತ್ತಾರೆ, ಇನ್ನೂ ಕೆಲವು ಕಡೆ ಮಂತ್ರವಾದಿಗಳು ಕೆಲವು ಬಾವಿಗಳನ್ನೇ ಮಂತ್ರಿಸಿ ಬಿಟ್ಟಿರುತ್ತಾರೆ. ಅಲ್ಲಿಗೆ ಹೋಗಿ ಆ ಭಾವಿಯ ನೀರನ್ನು ನಾಯಿ ಕಡಿದ ಸ್ಥಳದ ಮೇಲೆ ಸುರುವಿದರೆ ನಾಯಿ ಹುಚ್ಚು ಬರದು ಎಂದು ಹೇಳುವರು.

**ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ**

ಹುಚ್ಚು ನಾಯಿ ಕಚ್ಚಿದರೆ ಅದರ ಜೊಲ್ಲಿನಲ್ಲಿರುವ "ರೇಬಿಸ್" ವೈರಸ್ಸ ಜೀವಿಗಳು ಕಚ್ಚಿಸಿಕೊಂಡವರ ದೇಹದಲ್ಲಿ ಸೇರುವುವು. ಅಲ್ಲಿಂದ ಅವು ಮೆದು ಳನ್ನು ತಲುಪಿ ಮೆದುಳಿನಲ್ಲಿ ಉರಿಯು ತಣಿಯನ್ನುಂಟುಮಾಡಿ "ರೇಬಿಸ" ರೋಗ ಬರುವಂತೆ ಮಾಡುವವು. ಈ ರೋಗವನ್ನು ನಾವು ಹುಚ್ಚುನಾಯಿ ರೋಗ ಎಂದು ಕರೆಯುತ್ತೇವೆ. ನಾಯಿ ಕಡಿದ ಸ್ಥಳದಲ್ಲಿ ನೀರನ್ನು ಹಾಕುವ ದೆಂದರೆ ಗಾಯವನ್ನು ನೀರಿನಿಂದ ತೊಳೆದಂತೆ. ಇದು ಒಂದು ದೃಷ್ಟಿಯಿಂದ ಸರಿಯಾದ ಉಪಾಯವೇ ಹೌದು. ಆದರೆ ಉಪಚಾರ ಅಲ್ಲಿಗೇ ನಿಲ್ಲಿಸಬಾರದು. ನೀರು ಹಣಿಸುವ ಈ ಉಪಾಯವನ್ನು ಜನರು "ರೇಬಿಸ್" ರೋಗ ಲಸಿಕೆ ದೊರೆಯದಿದ್ದಾಗ ಮಾಡುತ್ತಿದ್ದರು. ಅದು ನಿಜ. ಆದರೆ ಇಂದು ಎಲ್ಲ ಕಡೆಗೂ "ರೇಬಿಸ್" ರೋಗದ ಲಸಿಕೆ ದೊರೆಯುತ್ತಿದ್ದಾಗ ಅವರಿಂದ ಉಪ ಚಾರ ಪಡೆಯದೆ ಕೇವಲ ಮಂತ್ರಿಸಿದ ನೀರಿನ ಮೇಲೆ ನಂಬಿಕೆ ಇಡುವುದು ಶುದ್ಧ ತಪ್ಪು.

ಇನ್ನು ಮಂತ್ರಿಸಿದ ನೀರಿನಲ್ಲಿ ಎಂತಹ ಶಕ್ತಿಯೂ ಇರುವುದಿಲ್ಲ. ನೀರು ನೀರೇ, ಅವನ್ನು ಸುರುವಿದರೆ ನಾಯಿಯ ಜೊಲ್ಲು ಆ ಗಾಯದಲ್ಲಿ ಇನ್ನೂ

ಕುಳಿತಿದ್ದರೆ ಅದು ಕಳೆದುಕೊಂಡು ಹೋಗುವುದು. ಅಷ್ಟೇ ಅದರ ಕೆಲಸ. ಗಾಯ ತೊಳೆಯಲು ಮಂತ್ರಿಸಿದ ನೀರೇ ಬೇಕೆಂದೇನಿಲ್ಲ. ನಿರ್ಮಲವಾದ ನೀರನ್ನು ಗಾಯದ ಮೇಲೆ ಸುರುವಿ ಸೋಪು (ಸಾಬೂನು) ಹಚ್ಚಿ ಸ್ವಚ್ಛವಾಗಿ ತೊಳೆದರೆ ಉತ್ತಮ. ಇದಲ್ಲದೆ ಗಾಯವನ್ನು ತೊಳೆದ ಮೇಲೂ ಆ ವ್ಯಕ್ತಿಗೆ "ರೇಬಿಸ್" ಲಸಿಕೆಯನ್ನು ಕೊಡಿಸಬೇಕು. ಈ ಸಂಗತಿಯನ್ನು ಮುಗ್ಧ ಜನರಿಗೆ ತಿಳಿಸಬೇಕು.

## ಬಸಿರು ಸ್ತ್ರೀ ಸ್ಮಶಾನದ ಸಮೀಪ ಹೋದರೆ ಗಾಳಿ ಸೇರುವುದು

**ನಂಬಿಕೆ**

ಗರ್ಭಿಣಿ ಸ್ತ್ರೀಯು ಅಕಸ್ಮಾತ್ತಾಗಿ ಯಾವುದೇ ಒಂದು ಕಾರಣದಿಂದ ಸ್ಮಶಾನದ ಸಮೀಪದಲ್ಲಿ ಹೋದರೆ, ದಾಟಿದರೆ ಇಲ್ಲವೆ ಭೂತಗಳಿರುವವೆಂದು ಪ್ರಚಲಿತ ಇದ್ದ ಗಿಡಗಳ ಬುಡದಲ್ಲಿ ಕುಳಿತರೆ ಅವಳಿಗೆ ಮೈಯಲ್ಲಿ ಭೂತ ಗಾಳಿ ಸೇರುವುದು ಎಂಬ ನಂಬಿಕೆ. ಇದನ್ನು ಬಿಡಿಸಲು ಅಂದರೆ ಮೈಯಲ್ಲಿ ಸೇರಿದ ಭೂತವನ್ನು ಹೊರಹಾಕಬೇಕು.

**ಆಚರಣೆ**

ಬಸಿರು ಸ್ತ್ರೀಯನ್ನು ಹಲವಾರು ವಿಧಗಳಿಂದ ಹಿಂಸಿಸಲಾಗುತ್ತದೆ. ಈ ಹಿಂಸೆಗಳಿಗೆ ಇತಿಮಿತಿಗಳು ಇಲ್ಲ. ಆ ಭಾಗದ ತಾಂತ್ರಿಕನು ಮಾಡಿದ್ದೆ ಆಟ. ಕಾರಣ ಅವುಗಳ ಯಾದಿಯನ್ನು ನೀಡಲು ಶಕ್ಯವಾಗುವುದಿಲ್ಲ. ಮುಖ್ಯ ವಾದವುಗಳೆಂದರೆ ಚಾಟಿಯಿಂದ ಹೊಡೆಯುವುದು, ಕಲ್ಲು ಹೊರಿಸಿ ನಿಲ್ಲಿಸು ವುದು, ಕೂದಲಿಗೆ ಹಗ್ಗ ಕಟ್ಟಿ ಗಿಡಕ್ಕೆ ಜೋತುಬಿಡುವುದು, ಬರೆ ಕೊಡುವುದು, ಕೂದಲನ್ನು ಕೀಳುವುದು, ಇತ್ಯಾದಿ.

**ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ**

ಸ್ತ್ರೀಯು ಗರ್ಭಿಣಿಯಾದಾಗ ಗರ್ಭಿಣಿಯರಿಗೆ ಬರುವ ಕೆಲವು ರೋಗ ಗಳು ಆಕೆಯಲ್ಲಿ ಕಾಣಿಸಬಹುದು. ಇವುಗಳಲ್ಲಿ ಒಂದು ಮಹತ್ವದ ತೊಂದರೆ

ಯೆಂದರೆ ಪ್ರಿಎಕ್ಲಾಂಪ್ಸಿಯಾ (Pre – eclampsia) ಎಂಬುದು. ಇಲ್ಲಿ ಗರ್ಭಿಣಿಯ ಮೈಯಲ್ಲಿ ಕೆಲವು ಸ್ರವಿಕೆಗಳು ಕೂಡಿಕೊಂಡು ಆಕೆಯ ರಕ್ತ ಒತ್ತಡವನ್ನು ಹೆಚ್ಚಿಸುತ್ತವೆ. ಮೂತ್ರ ಪಿಂಡವನ್ನು ಗಾಯಗೊಳಿಸುತ್ತವೆ. ಕಾಲುಗಳಿಗೆ ಬಾವು ಬರುತ್ತದೆ. ಈ ರೋಗದಲ್ಲಿ ಸ್ತ್ರೀಯ ವರ್ತನೆಯಲ್ಲಿ ಕೆಲವು ಬದಲಾವಣೆಗಳು ತೋರಲು ಸಾಧ್ಯ. ಇದನ್ನು ಅರಿಯದ ಮುಗ್ಧ ಜನರು ಸ್ತ್ರೀಗೆ ಗಾಳಿಯಾಗಿದೆಯೆಂದು, ಭೂತದ ತೊಂದರೆಯೆಂದು, ದೆವ್ವ ಬಡಿದಿದೆ ಎಂದು ಭಾವಿಸುತ್ತಾರೆ. ದೆವ್ವವನ್ನು ಬಿಡಿಸುವ ಸಲುವಾಗಿ ಕೆಲವು ವ್ಯಕ್ತಿಗಳು ಅಲ್ಲಲ್ಲಿ ಇರುತ್ತಾರೆ. ಇವರ ಹತ್ತಿರ ಸ್ತ್ರೀಯನ್ನು ಕರೆದುಕೊಂಡು ಹೋದಾಗ ಅವರು ಬಂದವರ ಸಂಶಯವನ್ನು ಇನ್ನೂ ಹೆಚ್ಚಿಸಿ ಅದು ಭೂತವೇ ಎಂಬುದನ್ನು ಖಾತ್ರಿ ಮಾಡಿಬಿಡುತ್ತಾರೆ. ಹಾಗೂ ಇಲ್ಲಸಲ್ಲದ ಉಪಾಯವನ್ನು ಹೇಳಿ ಬಂದವರಿಂದ ರೊಕ್ಕ ಹಿಡಿಯುತ್ತಾರೆ ಹಾಗೂ ಸ್ತ್ರೀಗೆ ಹಲವಾರು ತೊಂದರೆಗಳನ್ನು ಕೊಡುತ್ತಾರೆ. ಇದನ್ನು ಮಾಡದೆ ಸ್ತ್ರೀಯನ್ನು ನೇರವಾಗಿ ಒಳ್ಳೆಯ ವೈದ್ಯರ ಹತ್ತಿರ ಕರೆದುಕೊಂಡು ಹೋದರೆ ಔಷದ ಕೊಟ್ಟು ಆಕೆಯ ತೊಂದರೆಯನ್ನು ದೂರ ಮಾಡುವುದು ಸಾಧ್ಯವಿದೆ, ಹಾಗೂ ಸುಲಭವಿದೆ.

# ಮೊಲೆಗಳಿಗೆ ''ಮಲ್ಲಿಗೆ'' ಕಟ್ಟುವುದು ಅಥವಾ 'ಹೂ' ಮುಡಿಸುವುದು

### ನಂಬಿಕೆ

ಸ್ತ್ರೀಗೆ ಮೊಲೆಯಲ್ಲಿ ಗಂಟುಗಳಾದರೆ ಕೆಲವರ ಊಹೆಯಂತೆ ಆ ಮೊಲೆಗೆ "ಹೂ" ಮುಡಿಸುವದರಿಂದ ಅಥವಾ ಮಲ್ಲಿಗೆಯ ಮಾಲೆಯನ್ನು ಕಟ್ಟುವುದ ರಿಂದ ಗಂಟು ಕ್ರಮೇಣ ಕರಗಿಹೋಗುತ್ತದೆ ಎಂಬ ಭಾವನೆ.

### ಆಚರಣೆ

ಈ ನಂಬಿಕೆ ಕರ್ನಾಟಕ ರಾಜ್ಯದ ಕೆಲವು ಭಾಗಗಳಲ್ಲಿ ಬಲವಾಗಿ ಬೇರೂ ರಿದೆ. ಕೆಲವು ಹೆಂಗಳೆಯರು ಕುಳಿತುಕೊಂಡು ಮಲ್ಲಿಗೆ "ಹೂವಿ"ನಿಂದ ಮಾಲೆ ಗಳನು ಮಾಡಿ ಗಂಟಾದ ಸ್ತ್ರೀಯ ಮೊಲೆಯ ಸುತ್ತಲು ಹೂಗಳನ್ನು

ಕಟ್ಟುತ್ತಾರೆ ಇಲ್ಲವೆ ಮುಡಿಸುತ್ತಾರೆ. ಇದನ್ನು ಒಂದು ಸಂಭ್ರಮವನ್ನೇ ಮಾಡಿ ಆಚರಿಸುತ್ತಾರೆ.

**ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ**

ಮೊಲೆಯಲ್ಲಿ ಗಂಟುಗಳು ಕಾಣುವುದು ಹಲವಾರು ಕಾರಣಗಳಿಂದ ಗಂಟು ತೊಂದರೆ ಇಲ್ಲದ ಗಂಟಿರಬಹುದು. ಇಲ್ಲವೆ ಕ್ಯಾನ್ಸರ್ ಗಂಟಾಗಿರಬಹುದು ವಯಸ್ಕ ಸ್ತ್ರೀಯ ಮೊಲೆಯಲ್ಲಿ ಎಂತಹದೇ ಗಂಟು ಮೂಡಿದರೆ ಅದರ ಖಚಿತ ಗುಣವು ತಿಳಿಯುವವರಿಗೆ ಅದನ್ನು ಕ್ಯಾನ್ಸರ್ ಗಂಟೆಂದೇ ಪರಿಗಣಿಸಬೇಕು ಎಂಬ ತತ್ವವನ್ನು ವೈದ್ಯರು ಬಲವಾಗಿ ಪ್ರತಿಪಾದಿಸುತ್ತಾರೆ. ಸಾಧ್ಯವಾದಷ್ಟು ಬೇಗನೆ ಆ ಗಂಟನ್ನು ಹೊರತೆಗೆಯಲೇಬೇಕು. ಅದನ್ನು ಬಿಟ್ಟು ಮೊಲೆಗೆ ಮಲ್ಲಿಗೆ ಮುಡಿಸಿ ಸುಮ್ಮನಿದ್ದರೆ ಅಕಸ್ಮಾತಾಗಿ ಇದ್ದಿರಬಹುದಾದ ಗಂಟು ಕ್ಯಾನ್ಸರ್ ಆಗಿದ್ದರೆ ಅದು ಬೆಳೆಯುತ್ತ ಹೋಗುವುದು ಹಾಗೂ ಗಂಟು ಎಲ್ಲ ಕಡೆಗೂ ತನ್ನ ಕ್ಯಾನ್ಸರ್ ಜೀವಕಣಗಳನ್ನು ರವಾನಿಸಿದ ಮೇಲೆ ಆ ಸ್ತ್ರೀಯು ಆಸ್ಪತ್ರೆಗೆ ಬರಬಹುದು. ಇಷ್ಟು ತಡವಾಗಿ ಬಂದ ಸ್ತ್ರೀಯರಿಗೆ ಎಂತಹದೇ ಸೂಕ್ತ ಉಪಚಾರ ದೊರೆಯಲು ಸಾಧ್ಯವಿಲ್ಲ. ಈ ಮಾತನ್ನು ನಾವು ಸ್ತ್ರೀಯರ ಗಮನಕ್ಕೆ ತರಬೇಕು ಹಾಗೂ "ಹೂ ಮುಡಿಸುವ" ಕ್ರಿಯೆಯನ್ನು ತಪ್ಪಿಸಬೇಕು.

# ಉಗುರು ಸುತ್ತಾದರೆ ಕೋಣದ ಮೂಗಿನಲ್ಲಿ ಬೆರಳನ್ನು ಇಡಬೇಕು

**ನಂಬಿಕೆ**

ಉಗುರುಸುತ್ತಾದವರಿಗೆ ಬೇಗನೆ ಗುಣವಾಗಬೇಕಾದರೆ ಅವರು ಊರಲ್ಲಿಯ ದೇವರಿಗೆ ಬಿಟ್ಟ ಕೋಣದ ಮೂಗಲ್ಲಿ ಬೆರಳು ಹಾಕಬೇಕೆಂದು ಹೇಳುವರು. ಕೋಣದ ಮೂಗಿನಲ್ಲಿ ಬೆರಳು ಹಾಕುವದರಿಂದ ರೋಗ ಕಡಿಮೆಯಾಗುವುದು ಎಂಬ ನಂಬಿಕೆ.

**ಆಚರಣೆ**

ಹಲವು ವರ್ಷಗಳ ಹಿಂದೆ ಹಲವಾರು ಊರುಗಳಲ್ಲಿ ಊರಿನ ಗ್ರಾಮ ದೇವತೆಯ ಹೆಸರಿನಲ್ಲಿ ಒಂದು ಕೋಣವನ್ನು ಬಿಡುತ್ತಿದ್ದರು. ಈ ಕೋಣ ವನ್ನು ಐದು, ಆರು ವರ್ಷಗಳಾದ ಮೇಲೆ ಆ ದೇವತೆಗೆ ಬಲಿಕೊಡುವ ವಾಡಿಕೆ ಇತ್ತು. ಈ ಪದ್ಧತಿ ಈಗೀಗ ಬಹಳ ಕಡಿಮೆಯಾಗಿದೆ, ಅದರೂ ಕೆಲವು ಪ್ರದೇಶಗಳಲ್ಲಿ ಅದು ಇನ್ನೂ ನಡೆದೇ ಇದೆ ಇಂಥ ಕೋಣಗಳ ಮೂಗಿ ನಲ್ಲಿ ಉಗುರುಸುತ್ತಾದ ಬೆರಳನ್ನು ಸೇರಿಸಬೇಕೆಂದು ಜನರು ಉಪದೇಶಿಸು ತ್ತಿದ್ದರು. ಇದರಿಂದ ಉಗುರುಸುತ್ತು ಕಡಿಮೆಯಾಗುತ್ತದೆ ಎಂಬ ನಂಬಿಕೆ ಹುಟ್ಟಿಸುತ್ತಿದ್ದರು.

**ವೈಜ್ಞಾನಿಕ ಹಿನ್ನೆಲೆ ಹಾಗೂ ಹಾನಿ**

ಇಂದಿನವರೆಗೆ ಗೊತ್ತಿದ್ದ ವೈದ್ಯಶಾಸ್ತ್ರದ ತಿಳುವಳಿಕೆಯ ಪ್ರಕಾರ ಕೋಣದ ಮೂಗಿನಲ್ಲಿ ಹೇಳಿಕೊಳ್ಳುವಂತಹ ಯಾವುದೇ ಔಷದಯುಕ್ತ ಸ್ರವಿಕೆ ಕಂಡು ಬಂದಿಲ್ಲ. ಮಲೆನಾಡುಗಳಲ್ಲಿ ಕೋಣಗಳ ಮೂಗಿನಲ್ಲಿ ಅನೇಕ ಸಲ ರಕ್ತ ಹೀರುವ ಕೆಲವು ಪರಾನ್ನಜೀವಿಗಳು ಇರುವುದು ಅನೇಕರಿಗೆ ಗೊತ್ತಿರಬಹುದು. ಈ [illegible]ಗಳಲ್ಲಿಯೂ ಸಹ ಉಗುರು ಸುತ್ತಲೂ ಕಾಣುವ ಉರಿಯನ್ನು ಶಮನ [illegible]ಳಿಸುವ ಯಾವ ಸ್ರವಿಕೆಗಳೂ ಕಂಡುಬಂದಿಲ್ಲ. ಕಾರಣ ಮೇಲಿನ ನಂಬಿಕೆ ನಿರಾಧಾರವಾದದ್ದು ಎಂದು ಎನಿಸುವುದು. ಈ ನಂಬಿಕೆಯಿಂದ ವ್ಯರ್ಥ ಕಾಲಹರಣವಾಗುವುದು. ಹಾಗೂ ಆ ವ್ಯಕ್ತಿ ನೋವಿನಿಂದ ಬಳಲುತ್ತಲೇ ಹೋಗುತ್ತಾನೆ. ಇಂಥ ವ್ಯಕ್ತಿಗಳು ಅಕಸ್ಮಾತ್ತಾಗಿ ತಿನಿಸು ತಯಾರಿಸುವ ಅಂಗಡಿಯಲ್ಲಿ ಕಾರ್ಯಮಾಡುತ್ತಿದ್ದರೆ ಆ ತಿನಿಸುಗಳಲ್ಲಿ ಉಗುರಿನ ಸುತ್ತಲೂ ಉರಿಯತಣಿ ಉಂಟುಮಾಡಿದ ರೋಗಾಣುವನ್ನು ಸೇರಿಸುತ್ತಾನೆ. ಈ ರೋಗಾಣುಗಳು ತಿನಿಸುಗಳಲ್ಲಿ ಬೆಳೆದು ಅವುಗಳಲ್ಲಿ ವಿಷಯುಕ್ತ ಪದಾರ್ಥ ಗಳನ್ನು ಸ್ರವಿಸುತ್ತವೆ. ಇಂಥ ಆಹಾರವನ್ನು ಸೇವಿಸಿದ ವ್ಯಕ್ತಿಗಳಲ್ಲಿ ವಿಪರೀತ ವಾಂತಿಭೇದಿ ರೋಗ ತಲೆದೋರಿ ಅವರು ಬಳಲಬೇಕಾಗುತ್ತದೆ. ಇದನ್ನೇ ನಾವು ವಿಷಯುಕ್ತ ಆಹಾರ ಸೇವನೆ ಎಂದು ಪತ್ರಿಕೆಗಳಲ್ಲಿ ಓದುತ್ತೇವೆ.

— ✻ —

# ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು

ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ ಆವರಣ
ಬೆಂಗಳೂರು - 560 012

ಕಾರ್ಯನಿರ್ವಾಹಕ ಸಮಿತಿ :

ಅಧ್ಯಕ್ಷರು : **ಶ್ರೀ ಎಂ. ಎ. ಸೇತುರಾವ್**

ಉಪಾಧ್ಯಕ್ಷರುಗಳು : **ಡಾ|| ಪಿ. ಎಸ್. ಶಂಕರ್**
**ಶ್ರೀಮತಿ ಶ್ರೀಮತಿ ಹರಿಪ್ರಸಾದ್**

ಕಾರ್ಯದರ್ಶಿ : **ಹೆಚ್. ಎಸ್. ನಿರಂಜನಾರಾಧ್ಯ**

ರಾಜ್ಯದಲ್ಲಿ ವಿಜ್ಞಾನ ಚಳವಳಿಯನ್ನು ಬೆಳೆಸಲು ಪರಿಷತ್ತಿಗೆ ಸಕ್ರಿಯವಾಗಿ ಸಹಾಯಮಾಡಿರಿ.

ನಿಮ್ಮ ಊರಿನಲ್ಲಿ, ಸಂಸ್ಥೆಯಲ್ಲಿ, ಪರಿಷತ್ತಿನ ಘಟಕವನ್ನು ಸ್ಥಾಪಿಸಲು ಮುಂದಾಗಿರಿ.

ಪರಿಷತ್ತು ವಿಜ್ಞಾನ ಪ್ರಸಾರಕ್ಕಾಗಿ ಜನ್ಮ ತಾಳಿದುದಾದರೂ ಅದು ವಿಜ್ಞಾನಿಗಳದಲ್ಲ. ನಿಮ್ಮೆಲ್ಲರದು ಎಂಬುದನ್ನು ನೆನಪಿನಲ್ಲಿಡಿರಿ. ನೀವು ವಿಜ್ಞಾನ ಕಲಿತಿರದಿದ್ದರೂ ಪರಿಷತ್ತಿಗೆ ಸದಸ್ಯರಾಗಬಹುದು. ವಿಜ್ಞಾನ ಮುಖೇನ ಜನಸೇವೆ ಮಾಡಲು ಪರಿಷತ್ತು ಒಂದು ಮಾಧ್ಯಮ.

ವಿಜ್ಞಾನ ಪರಿಷತ್ತು ಯಾವುದೇ ರಾಜಕೀಯಕ್ಕೂ ಸಂಬಂಧಪಡದ ಸ್ವಾಯತ್ತ ಸಂಸ್ಥೆ. ಆದ್ದರಿಂದ ನಿಮ್ಮ ವೈಯಕ್ತಿಕ ನಂಬುಗೆಗಳೇನೇ ಇರಲಿ ವಿಜ್ಞಾನ ಪರಿಷತ್ತಿನ ಬಾಗಿಲು ಸದಾ ನಿಮಗೆ ತೆರೆದಿದೆ. ಅದಕ್ಕೆ ನಿಮ್ಮ ಬೆಂಬಲ ಅಗತ್ಯ.

ಹೆಚ್ಚಿನ ವಿವರಗಳಿಗಾಗಿ ಕಾರ್ಯದರ್ಶಿಗಳಿಗೆ ಬರೆಯಿರಿ.

# ಆರೋಗ್ಯ ಪಾಲನೆ — ಮೂಢ ಆಚಾರಗಳು

**ಲೇಖಕರು : ಡಾ|| ಸ. ಜ. ನಾಗಲೋಟಿಮಠ**

ಆರೋಗ್ಯಪಾಲನೆ - ಮೂಢ ಆಚಾರಗಳು ಎಂಬ ಕಿರುಹೊತ್ತಿಗೆಯನ್ನು ಡಾ || ಸ. ಜ. ನಾಗಲೋಟಿಮಠ, ಎಂ. ಡಿ. ಡಿ. ಸಿ. ಪಿ. ಪ್ರಿನ್ಸಿಪಾಲ್, ಬಿ. ಎಲ್. ಡಿ. ಇ. ರವರ ಮೆಡಿಕಲ್ ಕಾಲೇಜು, ಬಿಜಾಪುರ ಅವರು ರಚಿಸಿಕೊಟ್ಟಿದ್ದಾರೆ. ಇವರು ಬೆಳಗಾವಿ ವಿಜ್ಞಾನ ಕೇಂದ್ರದ ಕಾರ್ಯಾಧ್ಯಕ್ಷರು. ಆರೋಗ್ಯ ಪಾಲನೆಯಲ್ಲಿ ಆಚರಿಸುವ ಮೂಢ ನಂಬಿಕೆಗಳನ್ನು ಬಹಳ ಮಾರ್ಮಿಕವಾಗಿ ಉದಾಹರಣೆಗಳೊಂದಿಗೆ ಲೇಖಕರು ವಿವರಿಸಿದ್ದಾರೆ. ಕರಾವಿಪ ಘಟಕಗಳಿಗೆ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಕಾರ್ಯನಿರ್ವಹಿಸುವ ವೈದ್ಯರಿಗೆ ಮತ್ತು ಕಾರ್ಯಕರ್ತರಿಗೆ ಹಾಗೂ ವೈಜ್ಞಾನಿಕ ವಿಚಾರ ಗಳಲ್ಲಿ ಆಸಕ್ತಿ ಇರುವ ಎಲ್ಲರಿಗೂ ಈ ಕಿರುಹೊತ್ತಿಗೆ ನೆರವು ನೀಡುವುದರಲ್ಲಿ ಸಂದೇಹವಿಲ್ಲ.

---



**ಬೆಲೆ : 6–00**